KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಫೆಬ್ರವರಿ ೨೨, ೨೦೦೭ (ಫಾಲ್ಗುಣ ೩, ಶಕ ವರ್ಷ ೧೯೨೮) | ಸಂಚಿಕೆ ೮ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಜಲಸಂಪನ್ಮೂಲ ಸಚಿವಾಲಯ**

**ವಿಷಯ:** ಶ್ರೀ ಕೆ.ಆರ್. ಕುಲಕರ್ಣಿ, ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಇವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 53 ಸೇಇವಿ 2006, ಬೆಂಗಳೂರು, ದಿನಾಂಕ: 3ನೇ ಜನವರಿ 2007**

ಶ್ರೀ ಕೆ.ಆರ್. ಕುಲಕರ್ಣಿ, ಕಾರ್ಯಪಾಲಕ ಅಭಿಯಂತರರು, (ನಿವೃತ್ತ) ಇವರು ಸಣ್ಣ ನೀರಾವರಿ ವಿಭಾಗ, ಬಿಜಾಪುರ ಇಲ್ಲಿ ಕಾರ್ಯಪಾಲಕ ಅಭಿಯಂತರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ 2006 ಜೂನ್ ಮತ್ತು ಜುಲೈ ತಿಂಗಳಲ್ಲಿ ನಿಯಮಬಾಹಿರವಾಗಿ ಉಗ್ರಾಣ ಸಾಮಗ್ರಿಗಳ ಖರೀದಿ ಹಾಗೂ ಹಲವಾರು ತುಂಡುಗುತ್ತಿಗೆ ಕಾಮಗಾರಿಯಲ್ಲಿ ಮೇಲಾಧಿಕಾರಿಗಳ ಅನುಮತಿ ಪಡೆಯದೆ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದ ಮೇಲ್ಕಂಡ ದುರ್ನಡತೆಗಳಿಗಾಗಿ ಶ್ರೀ ಕೆ.ಆರ್. ಕುಲಕರ್ಣಿ, ಕಾರ್ಯಪಾಲಕ ಅಭಿಯಂತರರು, (ನಿವೃತ್ತ) ಇವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಬೇಕಾಗಿ ಸರ್ಕಾರವು ಭಾವಿಸಿದೆ.

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಆರ್. ಕುಲಕರ್ಣಿ ಕಾರ್ಯಪಾಲಕ ಅಭಿಯಂತರರು, (ನಿವೃತ್ತ) ಇವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11, 11ಎ ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 59

**FOREST, ECOLOGY AND ENVIRONMENT SECRETARIAT**

**Subject:** Constitution of Committee to ensure implementation of the conditions stipulated for projects in the Environmental Clearance issued by the Ministry of Environment and Forest (MoEF), Government of India (GoI) and Government of Karnataka (GoK).

**Read:**
1) Environment Impact Assessment Notification No. S.O.60(E) dated: 27.01.1994 of MoEF, GOI.
2) Environment Impact Assessment Notification No. S.O.1533(E) dated: 14.09.2006 of MoEF, GoI.
3) G.O.No. FEE 14 ENV 2000 (P) dated: 21.08.2003 of Gok.

4) G.O.No. FEE 129 ECO 2004, dated: 04.08.2005 of GoK.
5) Section 5 of Environment (Protection) Act, 1986 delegated to Government of Karnataka vide Notification No.S.O. 152(E) dated: 10.02.1988 of MoEF, GoI.

**PREAMBLE:**

The Ministry of Environment and Forests, Government of India accords Environmental Clearance for the projects as per the provisions of Environment Impact Assessment Notifications and its subsequent amendments vide reference (1) & (2), with specific and general conditions subject to strict compliance by the project proponents/Authorities. The State Environmental Clearanace Committee (SECC) vide reference (3) & (4) and State Environmental Impact Assessment Authority (SEIAA) also accords Environmental Clearance to certain projects with specific and general conditions subject to strict compliance by the project proponents/Authorities. These conditions stipulated in the environmental clearance issued by the said Authorities needs to be monitored periodically by the State Government/KSPCB for their effective implementation. For this purpose the State Government desires to constitute a Committee and hence the order.

**GOVERNMENT ORDER No. FEE 153 ECO 2005, Bangalore, Dated: 27th December 2006**

In the circumstances explained in the preamble the Government hereby constitutes the Committee under Section 5 of the Environment (Protection) Act, 1986 delegated to Government of Karnataka vide Notification No. S.O. 152(E) dated: 10.02.1988 vide reference (5) above consisting of the following members:

| | | |
|---|---|---|
| 1 | Senior Director (Technical Cell), Multistoried Building, Department of Forest, Ecology and Environment (DFEE), Bangalore-560 001. | Chairman |
| 2 | Member Secretary,<br>Karnataka State Pollution Control Board,<br>No.49, Parisara Bhavan, Church Street, Bangalore-560 001 | Member |
| 3 | Regional Director (Environment) Concerned, Department of Forest, Ecology and Environment. | Member |
| 4 | Representative of the Directorate of Factories and Boilers, Karmika Bhavan, 2nd Floor, Bannerghatta Road, Bangalore 560 029. | Member |
| 5 | Representative of the Department of Mines and Geology, Kanija Bhavan, Race Course Road, Bangalore 560 001. | Member |
| 6 | Chief Engineer (Corporate Planning and Waste Water Management), Bangalore Water Supply and Sewerage Board, Cauvery Bhavan, Bangalore 560 001. | Member |
| 7 | Executive Engineer-Concerned, Karnataka Urban Water Supply and Drainage Board, Jala Bhavan, No.6, I Main, BTM Layout, Bannerghatta Road, Bangalore-560 029. | Member |
| 8 | Scientific Officer Concerned,<br>Technical Cell, Multi Storied Building, Department of Forest, Ecology and Environment, Bangalore 560 001. | Member Secretary |

The Terms and Conditions of the Committee are as follows:

1. The Committee shall inspect project/industries for which environmental clearances have been issued.
2. The selection of the project/industries for inspection by the committee shall be on random basis.
3. The Committee shall have powers of entry and inspection of the project/industries, verify relevant documents/files/records and collect samples (if required) to ensure implementation of necessary environmental safeguards.
4. The specific complaints referred by the Department of Forest, Ecology and Environment shall also be inspected by the Committee.

5. The observations and recommendations of the Committee shall be submitted to the Secretary (Ecology & Environment), Department of Forest, Ecology and Environment/The Secretary to Government, Ministry of Environment & Forests, Government of India, New Delhi-110 003.
6. The Committee members shall be given full cooperation, facilities and documents/data by the project proponents/Authorities during inspection.
7. The Committee can co-opt if deemed necessary an Expert Resource Person or concerned Department Official as Special Invitee for inspection.
8. The concerned Regional Officer of KSPCB shall accompany the Committee with all relevant documents and logistic facilities.

This Government Order super cedes the G.O.No. FEE 153 ECO 2005 issued on 16.06.2006 by the State Government.

By Order and in the name of the Governor of Karnataka,

**N.R. JAGANMATHA**

P.R. 68

Under Secretary to Government,
Forest, Ecology and Environment Department.

**ಸಾರ್ವಜನಿಕ ಉದ್ದಿಮೆಗಳ ಸಚಿವಾಲಯ**

**ವಿಷಯ:** ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ಹೆಚ್ಚುವರಿ ನೌಕರರ ಸ್ವಯಂ ನಿವೃತ್ತಿಯಿಂದಾಗಿ ನೀಡಬೇಕಾದ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಅಧ್ಯಕ್ಷರು ಹಾಗೂ ವ್ಯವಸ್ಥಾಪಕ ನಿರ್ದೇಶಕರು ಇವರ ಅ.ಸ.ಪ. ಸಂಖ್ಯೆ: ಕೆ.ಎಸ್.ಐ.ಸಿ./ಸಿಬ್ಬಂದಿ/ಸ್ವನಿಯೋ/2006-07/1410 ಮತ್ತು 1059, ದಿನಾಂಕ: 12.10.2006 ಮತ್ತು 08.11.2006.
2) ರಾಜ್ಯ ಲೆಕ್ಕ ಪತ್ರ ಇಲಾಖೆ, ಇವರ ಪತ್ರ ಸಂಖ್ಯೆ: ರಾ.ಲೆ.ಪ/ಎ4/ತನಿಖೆ/ಕೆ.ಎಸ್.ಐ.ಸಿ/24/2003-04/3680, ದಿನಾಂಕ: 03.11.2006.
3) ಅಧ್ಯಕ್ಷರು ಹಾಗೂ ವ್ಯವಸ್ಥಾಪಕ ನಿರ್ದೇಶಕರು ಇವರ ಅ.ಸ.ಪ. ಸಂಖ್ಯೆ: ಕೆ.ಎಸ್.ಐ.ಸಿ/ಸಿಬ್ಬಂದಿ/ಸ್ವನಿಯೋ/2006-07/1133, ದಿನಾಂಕ: 2.9.2006.
4) ರಾಜ್ಯ ಲೆಕ್ಕ ಪತ್ರ ಇಲಾಖೆ ಇವರ ಪತ್ರ ಸಂಖ್ಯೆ: ರಾ.ಲೆ.ಪ/ಎ4/ತನಿಖೆ/ಕೆ.ಎಸ್.ಐ.ಸಿ/24/2003-04/2554, ದಿನಾಂಕ: 26.08.2006.
5) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ (ಬಿಪಿಇ)/13/ಎ.ಆರ್.ಯು/2001, ದಿನಾಂಕ: 10.8.2001.
6) ಸರ್ಕಾರದ ಆದೇಶ ಸಂಖ್ಯೆ: ಡಿಪಿಇ/17/ಎ.ಆರ್.ಯು/2006, ದಿನಾಂಕ: 07.11.2006.

**ಪ್ರಸ್ತಾವನೆ:**

ಪ್ರಸ್ತಾವನೆಯಲ್ಲಿ ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮ ನಿಯಮಿತದ ಉತ್ಪಾದನಾ ಮತ್ತು ಇತರ ಚಟುವಟಿಕೆಗಳಿಗೆ ಈಗಿರುವ ಮಾನವ ಸಂಪನ್ಮೂಲವು ಹೆಚ್ಚುವರಿಯಾಗಿ ಕಂಡುಬಂದಿದ್ದರಿಂದ ಹಾಗೂ ಇದರಿಂದ ಸಂಸ್ಥೆಗೆ ಆರ್ಥಿಕ ಹೊರೆಯಾಗಿರುವುದು ಕಂಡು ಬಂದಿದ್ದರಿಂದ ಈ ಹೆಚ್ಚುವರಿ ಮಾನವ ಸಂಪನ್ಮೂಲವನ್ನು ಕಡಿತಗೊಳಿಸಲು ಸ್ವಯಂ ನಿವೃತ್ತಿ ಯೋಜನೆಯನ್ನು ಘೋಷಿಸಲಾಯಿತು.

ಈ ಸ್ವಯಂ ನಿವೃತ್ತಿ ಯೋಜನೆಯು ಅಧಿಸೂಚನೆಗೆ ಪ್ರತಿಯಾಗಿ ಸುಮಾರು 37 ಸ್ವಯಂ ನಿವೃತ್ತಿ ಅರ್ಜಿಗಳನ್ನು ಸ್ವೀಕರಿಸಲಾಯಿತು. ಸ್ವಯಂ ನಿವೃತ್ತಿ ಹೊಂದಲು ಇಚ್ಛಿಸಿದ 37 ಜನ ನೌಕರರ ಅರ್ಜಿಗಳನ್ನು ಪರಿಶೀಲಿಸಿದ ನಂತರ 30 ಜನರ ಅರ್ಜಿಗಳನ್ನು ಅಂಗೀಕರಿಸಿ ಅದನ್ನು ದಿನಾಂಕ: 4.8.2006 ರಿಂದ ಜಾರಿಗೆ ಬರುವಂತೆ ಸ್ವಯಂ ನಿವೃತ್ತಿ ಸೌಲಭ್ಯಗಳನ್ನು ಪಾವತಿಸಲು ಮೇಲೆ ಓದಲಾದ (6)ರ ಆದೇಶದಲ್ಲಿ ಅನುಮತಿ ನೀಡಲಾಗಿತ್ತು. ಈ ಸ್ವಯಂ ನಿವೃತ್ತಿ ಯೋಜನೆಯ ಅಧಿಸೂಚನೆಯ ಪ್ರತಿಯಾಗಿ 07 ಸ್ವಯಂ ನಿವೃತ್ತಿ ಅರ್ಜಿಗಳನ್ನು ಸ್ವೀಕರಿಸಿ ಸ್ವಯಂ ನಿವೃತ್ತಿ ಹೊಂದಲು ಇಚ್ಛಿಸಿದ:

1) ರೇಷ್ಮೆ ನೇಯ್ಗೆ ಕಾರ್ಖಾನೆ, ಮೈಸೂರು-05 ಕಾರ್ಮಿಕ/ಸಿಬ್ಬಂದಿಗಳು
2) ರೇಷ್ಮೆ ನೂಲು ತೆಗೆಯುವ ಘಟಕ ತಿ.ನರಸಿಪುರ-02 ಕಾರ್ಮಿಕ/ಸಿಬ್ಬಂದಿಗಳು

ಒಟ್ಟು 7 ನೌಕರರ ಅರ್ಜಿಗಳನ್ನು ಪರಿಶೀಲಿಸಿದ ನಂತರ 07 ಜನರ ಕಾರ್ಮಿಕ/ಸಿಬ್ಬಂದಿಗಳು ಅರ್ಜಿಗಳನ್ನು ಅಂಗೀಕರಿಸಿ ಅದನ್ನು ದಿನಾಂಕ: 13.09.2006 ಮತ್ತು 16.09.2006 ರಿಂದ ಜಾರಿಗೆ ಬರುವಂತೆ ಸ್ವಯಂ ನಿವೃತ್ತಿ ಸೌಲಭ್ಯಗಳನ್ನು ಪಾವತಿಸಲು ಹಣ ಬಿಡುಗಡೆಗಾಗಿ ಮೇಲೆ ಓದಲಾದ (1)ರ ಪತ್ರದಲ್ಲಿ ಅಧ್ಯಕ್ಷರು ಹಾಗೂ ವ್ಯವಸ್ಥಾಪಕ ನಿರ್ದೇಶಕರು ಕೆ.ಎಸ್.ಐ.ಸಿ. ಇವರು ಕೋರಿರುತ್ತಾರೆ. ರಾಜ್ಯ ಲೆಕ್ಕಪತ್ರ ಇಲಾಖೆಯ ಮೇಲೆ ಓದಲಾದ (2)ರ ಪತ್ರದಲ್ಲಿ 07 ಜನ ಉದ್ಯೋಗಿಗಳ ನಿವೃತ್ತಿ ಸೌಲಭ್ಯಗಳನ್ನು ಪಾವತಿಸಲು ಘಟನಾ ಪೂರ್ವ ಲೆಕ್ಕ ತನಿಖೆಯನ್ನು ಕೈಗೊಂಡು ರೂ.32,10,961/- ಆಗಿರುತ್ತದೆಂದು ವರದಿ ಸಲ್ಲಿಸಿರುತ್ತಾರೆ. ಆರ್ಥಿಕ ಇಲಾಖೆಯು ಡಿಪಿಇ/17/ಎ.ಆರ್.ಯು/2006ರ ಕಡತದಲ್ಲಿ ಉಲ್ಲೇಖ ಸಂಖ್ಯೆ: ಎಫ್‌ಡಿ/2207/ಇ.ಎಕ್ಸ್.ಪಿ-1/06, ದಿನಾಂಕ: 29.12.2006 ರಂದು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ಘಟನಾ ಪೂರ್ವ ಲೆಕ್ಕ ತನಿಖೆಯ ವಿವರಗಳನ್ನು ಪರಿಶೀಲಿಸಿದ ನಂತರ 07 ಜನ ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳಿಗಾಗಿ ರೂ.32,10,961/- ಸಾಲವಾಗಿ ಬಿಡುಗಡೆ ಮಾಡಲು ಸಹಮತಿಸಿದ್ದಾರೆ. ಹೀಗಾಗಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಪಿಇ/17/ಎ.ಆರ್.ಯು./2005, ಬೆಂಗಳೂರು, ದಿನಾಂಕ: 6ನೇ ಜನವರಿ 2007**

ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮದ ನಿಯಮಿತದ ಸಂಸ್ಥೆಗಳಾದ ರೇಷ್ಮೆ ನೇಯ್ಗೆ ಕಾರ್ಖಾನೆ, ಮೈಸೂರು, ರೇಷ್ಮೆ ನೂಲು ತೆಗೆಯುವ ಘಟಕ, ತಿ.ನರಸೀಪುರ ಘಟಕಗಳಲ್ಲಿ ಸ್ವಯಂ ನಿವೃತ್ತಿ ಯೋಜನೆ ಪಡೆದ 07 ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಪರಿಹಾರಗಳನ್ನು ವಿತರಿಸಲು ಸಾಧ್ಯವಾಗುವಂತೆ ರೂ.32,10,961/- (ರೂಪಾಯಿ ಮೂವತ್ತೆರಡು ಲಕ್ಷದ ಹತ್ತು ಸಾವಿರದ ಒಂಭೈನೂರ ಅರವತ್ತೊಂದು ಮಾತ್ರ) ಸಾಲವಾಗಿ ಬಿಡುಗಡೆ ಮಾಡಲು ಆದೇಶಿಸಿದೆ. ಈ ಮೊತ್ತವನ್ನು ಲೆಕ್ಕ-ಶೀರ್ಷಿಕೆ 6852-02-190-4-02 ರಲ್ಲಿ ಬಿಡುಗಡೆ ಮಾಡಲಾಗಿದೆ.

ಈ ಮೇಲಿನ ಹಣವನ್ನು 07 ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳನ್ನು ವಿತರಿಸುವ ಸಲುವಾಗಿಯೇ ಉಪಯೋಗಿಸತಕ್ಕದ್ದು ಹಾಗೂ ಆಡಳಿತ ಇಲಾಖೆಯು ಸ್ವಯಂ ನಿವೃತ್ತಿ ಪಡೆಯುತ್ತಿರುವ ಅಧಿಕಾರಿ/ನೌಕರರಿಂದ ಸರ್ಕಾರಕ್ಕೆ/ಸಂಸ್ಥೆಗೆ ಬರಬೇಕಾಗಿರುವ ಬಾಕಿ ಹಣವನ್ನು ಸ್ವಯಂ ನಿವೃತ್ತಿ ಹಣದಿಂದ ಕಟಾಯಿಸತಕ್ಕದ್ದು.

ಈ ಹಣವನ್ನು ಉಪ ಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆ ಇವರ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆಯಿಂದ ಪಡೆಯಬಹುದಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ-2207/ವೆಚ್ಚ-1/06, ದಿನಾಂಕ: 29.12.2006ರ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾರಯಣ ಕೆ. ನಾಯಕ**
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),
ಸಾರ್ವಜನಿಕ ಉದ್ದಿಮೆಗಳ ಇಲಾಖೆ.

ಪಿ.ಆರ್. 71

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಗಂಗಪ್ಪ ಸಾವಳೆ, 1ನೇ ಅಧಿಕ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ ಇವರ ವಿರುದ್ಧ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ:**
1) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್: ಬಿಎಲ್‌ವೈ-267/02 ದಿನಾಂಕ: 23.4.2002.
2) ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಲಾ 187 ಪಿಪಿಇ 2002 ದಿನಾಂಕ: 23.06.2003.
3) ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ: 21.07.2003.
4) ಸರ್ಕಾರಿ ಆದೇಶ ಸಂಖ್ಯೆ: ಲಾ 186 ಪಿಪಿಇ 01 ದಿನಾಂಕ: 10.10.2003.
5) ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ: 27.07.2005.
6) 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಒಇ 554 ಪಿಪಿಇ 2005, ದಿನಾಂಕ: 26.10.2006
7) ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ: 27.11.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ದಿನಾಂಕ: 23.04.2002ರ ಪತ್ರದಲ್ಲಿ ಶ್ರೀ ಗಂಗಪ್ಪ ಸಾವಳೆ, 1ನೇ ಅಧಿಕ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ ಇವರು 1) ಬಳ್ಳಾರಿ ಸರ್ಕಾರಿ ಅಭಿಯೋಜಕರಾಗಿ ವಿಶೇಷ ನ್ಯಾಯಾಲಯದ ಪ್ರಕರಣ ಸಂಖ್ಯೆ:65/98ನ್ನು ನಡೆಸುತ್ತಿದ್ದಾಗ ಪ್ರಾ.ಸಾ-1 ಆರಕ್ಷಕ ಪೇದೆಯಾಗಿದ್ದು ಇವರ ಸಾಕ್ಷ್ಯದಲ್ಲಿ ಹಣವನ್ನು ವಹಿಸಿಕೊಟ್ಟ ಪಂಚನಾಮೆಯ ವಿವರಗಳನ್ನು ಕುರಿತು ಸ್ಪಷ್ಟ ಸಾಕ್ಷ್ಯಾಧಾರಗಳನ್ನು ಪಡೆದಿರುವುದಿಲ್ಲ ಹಾಗೂ ನಿಶಾನೆ ಪಿ-6 ಮಹಜರನ್ನು ಮತ್ತು ಅವರ ಸಹಿಯನ್ನು ಗುರುತಿಸದೇ, 2) ವಿಶೇಷ ನ್ಯಾಯಾಲಯದ ಪ್ರಕರಣ ಸಂಖ್ಯೆ:65/98ನ್ನು ನಡೆಸುತ್ತಿದ್ದಾಗ ನ್ಯಾಯಾಲಯದ ಮುಂದೆ ಆರೋಪಿಯ ಮೇಲೆ ಅಭಿಯೋಗ ಹೂಡಲು ಪರವಾನಗಿ ನೀಡಿದ ಅಧಿಕಾರಿಯವರನ್ನು ಹಾಜರುಪಡಿಸಿಕೊಂಡ ವಿಚಾರಣೆ ಮಾಡಿರುವುದಿಲ್ಲ. ಹಾಗೂ ಆರೋಪಿಯ ಮೇಲೆ ಅಭಿಯೋಗ ಹೂಡಲು ಹೊರಡಿಸಿದ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ 37 ಎಂಎಸ್‌ಎ 97, ದಿನಾಂಕ: 21.07.98ರ ದಾಖಲೆಯನ್ನು ಅಭಿಯೋಜನೆ ಪಕ್ಷದ ಪರವಾಗಿ ಹಾಜರುಪಡಿಸಿ ಗುರುತಿಸದೇ-ಕರ್ತವ್ಯವನ್ನು ಬೇಜವಾಬ್ದಾರಿತನದಿಂದ ಹಾಗೂ ನಿರ್ಲಕ್ಷ್ಯದಿಂದ ನಿರ್ವಹಿಸಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(ii) 3(iii)ನ್ನು ಉಲ್ಲಂಘಿಸಿರುವುದರಿಂದ ಇವರ ವಿರುದ್ಧ ಕ್ರಮ ಜರುಗಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ (2) ರಲ್ಲಿ ಓದಲಾಗಿರುವ ದಿನಾಂಕ: 23.06.2003ರ ಕಾರಣ ಕೇಳುವ ತಿಳುವಳಿಕೆ ಪತ್ರದಲ್ಲಿ ಶ್ರೀ ಗಂಗಪ್ಪ ಸಾವಳೆ, ಸರ್ಕಾರಿ ಅಭಿಯೋಜಕರು, ಬಳ್ಳಾರಿ ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣ ಪಟ್ಟಿ ಅನುಬಂಧ-1 ಮತ್ತು 4ನ್ನು ಜಾರಿಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾಗಿರುವ 21.7.2003ರ ಪತ್ರದಲ್ಲಿ ಆರೋಪಿತ ಅಧಿಕಾರಿಯು ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲೆ ಮಾಡಿರುವ ಎಲ್ಲ 2 ಆಪಾದನೆಗಳನ್ನು ಅಲ್ಲಗಳೆದಿರುತ್ತಾರೆ.

ಆದರೆ ಆರೋಪಿತ ಅಧಿಕಾರಿಯ ವಿವರಣೆ ಸಮಂಜಸವಾಗಿಲ್ಲದೇ ಇದ್ದುದರಿಂದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಮೇಲೆ (4) ರಲ್ಲಿ ಓದಲಾಗಿರುವ 24.6.2003 ರಲ್ಲಿ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲಾಗಿದೆ.

ವಿಚಾರಣಾಧಿಕಾರಿಯವರು ಮೇಲ 5 ರಲ್ಲಿ ಓದಲಾಗಿರುವ ಪತ್ರದೊಡನೆ ಇಲಾಖಾ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ವಿಚಾರಣಾಧಿಕಾರಿಯವರು "ಆರೋಪ-1 ರುಜುವಾತುಪಡಿಸಿರುವುದಿಲ್ಲ, ಆರೋಪ-2 ರುಜುವಾತುಪಡಿಸಲಾಗಿದೆ" ಎಂದು ನಿಷ್ಕರ್ಷೆ ನೀಡಿರುತ್ತಾರೆ.

ಮೇಲೆ (6) ರಲ್ಲಿ ಓದಲಾಗಿರುವ 26.10.2006ರ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಸರ್ಕಾರಿ ಅಧಿಕಾರಿಗೆ ಒದಗಿಸಿ ಅವರ ಹೇಳಿಕೆಯನ್ನು ನೀಡಲು 30 ದಿನಗಳ ಕಾಲಾವಕಾಶವನ್ನು ನೀಡಲಾಗಿತ್ತು.

ಆರೋಪಿತ ಸರ್ಕಾರಿ ಅಧಿಕಾರಿಯು ಮೇಲೆ (7) ರಲ್ಲಿ ಓದಲಾಗಿರುವ 27.11.2006 ರಂದು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ ಸದರಿ ಸಾಕ್ಷಿ ಮಾಡಿಸದೇ ಇರುವುದಕ್ಕೆ ಯಾವುದೇ ದುರುದ್ದೇಶ ಇರದೇ ತನ್ನ ನಜರಚೂಕ ಮಾತ್ರ ಕಾರಣವಾಗಿರುವುದರಿಂದ ಸದರಿ ಸಾಕ್ಷ್ಯ ಮಾಡಿಸದಿರುವ ಏಕ ಮಾತ್ರ ಕಾರಣಕ್ಕೆ ಆರೋಪಿಯ ಬಿಡುಗಡೆಯಾಗಿರದೇ ಬೇರೆ ಕಾರಣಗಳ ಆಧಾರದ ಮೇಲಿಂದ ಸಹ ಬಿಡುಗಡೆಯಾಗಿರುವುದರಿಂದ ಹಾಗೂ ತನ್ನ ಸೇವೆಯಲ್ಲಿ ನಡೆದ ಮೊದಲ ತಪ್ಪಾಗಿರುವುದರಿಂದ ಎಚ್ಚರಿಕೆ ನೀಡಿ ಕ್ಷಮಿಸಬೇಕೆಂದು ಕೋರಿರುತ್ತಾರೆ.

ಆದುದರಿಂದ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ರಲ್ಲಿ ನಮೂದಿಸಿರುವ 1 ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮಯುತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸುವ ಬಗ್ಗೆ ನೇಮಕಾತಿ ಪ್ರಾಧಿಕಾರಿ ಮತ್ತು ಶಿಸ್ತಿನ ಪ್ರಾಧಿಕಾರಿಯು ನಿರ್ಣಯಿಸಿರುತ್ತಾರೆ. ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 554 ಪಿಪಿಇ 2005, ಬೆಂಗಳೂರು, ದಿನಾಂಕ: 10ನೇ ಜನವರಿ 2007**

ಶ್ರೀ ಗಂಗಪ್ಪ ಸಾವಳೆ, 1ನೇ ಅಧಿಕ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ವಿವರಿಸಿರುವ ಪ್ರಕರಣದಲ್ಲಿ ಮಾಡಲಾಗಿರುವ ಎರಡು ಆರೋಪಗಳಲ್ಲಿ 2ನೆಯ ಆಪಾದನೆ ಸಾಬೀತಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ರಲ್ಲಿ ನಮೂದಿಸಿರುವ ದಂಡನೆಯನ್ನು ವಿಧಿಸಿ ದಿನಾಂಕ: 1.3.2007 ರಂದು ಸಂಭವಿಸುವ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದೊಂದಿಗೆ ತಡೆ ಹಿಡಿಯುವ ದಂಡನೆಯನ್ನು ವಿಧಿಸಲಾಗಿದೆ. ಈ ದಂಡನೆಯು ದಿನಾಂಕ: 01.03.2007 ರಿಂದ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 72

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಗ್ರಾಮ ಸ್ವರಾಜ್ - ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆ-ಅನುಷ್ಠಾನದ ಕುರಿತು.

**ಪ್ರಸ್ತಾವನೆ:**

ಗ್ರಾಮ ಸ್ವರಾಜ್ ಯೋಜನೆಯ ಕುರಿತು ವಿಶ್ವಬ್ಯಾಂಕಿನೊಂದಿಗೆ ಸಮಾಲೋಚನೆ ನಂತರ ದಿನಾಂಕ: 24.7.2006 ರಂದು ವಿಶ್ವಬ್ಯಾಂಕಿನೊಂದಿಗೆ ಕೇಂದ್ರ ಸರ್ಕಾರವು ಅಭಿವೃದ್ಧಿ ಸಾಲದ ಒಪ್ಪಂದವನ್ನು ಮತ್ತು ಕರ್ನಾಟಕ ಸರ್ಕಾರವು ಯೋಜನಾ ಒಪ್ಪಂದಗಳಿಗೆ ಸಹಿ ಮಾಡಿದೆ. ಕರ್ನಾಟಕದ ಅಡ್ವೋಕೇಟ್ ಜನರಲ್‌ರವರು ಈ ಒಪ್ಪಂದಗಳ ಬಗ್ಗೆ ಕಾನೂನು ಅಭಿಪ್ರಾಯ ಪ್ರಮಾಣ ಪತ್ರವನ್ನು ನೀಡಿರುತ್ತಾರೆ. ಸರ್ಕಾರವು ಈ ಒಪ್ಪಂದಗಳ ಪ್ರಕಾರ ಹಾಗೂ ಯೋಜನಾ ಅಂದಾಜು ದಾಖಲೆ ಮತ್ತು ಕಾರ್ಯಾಚರಣೆ ಕೈಪಿಡಿಯ ಪ್ರಕಾರ ಗ್ರಾಮ ಸ್ವರಾಜ್ ಯೋಜನೆಯನ್ನು ಅನುಷ್ಠಾನಗೊಳಿಸಲು ಪರಿಗಣಿಸಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 13 ಗ್ರಾಸ್ವಯೋ, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಗ್ರಾಮ ಸ್ವರಾಜ್-ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಗೆ ಐದೂವರೆ ವರ್ಷಗಳ ಅವಧಿಗೆ ರೂ.600 ಕೋಟಿಗಳನ್ನು ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ. ಅನುಬಂಧದಲ್ಲಿನ ಘಟಕವಾರು ನಿಗದಿಪಡಿಸಿದ ಯೋಜನಾ ವೆಚ್ಚಗಳಿಗೆ ಅನುಮೋದನೆಯನ್ನು ನೀಡಿದೆ. ಗ್ರಾಮ ಸ್ವರಾಜ್ ಯೋಜನೆಯನ್ನು ಯೋಜನಾ ಅಂದಾಜು ದಾಖಲೆ ಮತ್ತು ಇದಕ್ಕೆ ಲಗತ್ತಿಸಿದ ಕಾರ್ಯಾಚರಣೆ ಕೈಪಿಡಿಯ ಮಾರ್ಗಸೂಚಿಯ ಪ್ರಕಾರ ಅನುಷ್ಠಾನಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಗ್ರಾಮ ಸ್ವರಾಜ್ - ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆ- ಸಂಗ್ರಹಣಾ ಕೈಪಿಡಿಯ ಪ್ರಕಾರ ಅನುಷ್ಠಾನದ ಕುರಿತು.

**ಪ್ರಸ್ತಾವನೆ:**

ಗ್ರಾಮ ಸ್ವರಾಜ್ ಯೋಜನೆಯ ಅನುಷ್ಠಾನವನ್ನು ಕಾರ್ಯಾಚರಣೆ ಕೈಪಿಡಿಯ ಮಾರ್ಗಸೂಚಿಗಳ ಪ್ರಕಾರ ಅನುಷ್ಠಾನಗೊಳಿಸಲಾಗುತ್ತದೆ. ಈ ಯೋಜನೆಯಡಿ ಅನುಷ್ಠಾನದ ಘಟಕಗಳು ಕಾರ್ಯಕ್ರಮದ ಅನುಷ್ಠಾನದಲ್ಲಿ ಸಾಮಗ್ರಿ,ಕೆಲಸ ಹಾಗೂ ಸೇವೆಗಳನ್ನು ಸಂಗ್ರಹಣೆ ಮಾಡಬೇಕಾಗುತ್ತದೆ. ಕರ್ನಾಟಕ ಪಾರದರ್ಶಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಅಧಿನಿಯಮ 1999 ಮತ್ತು ಅದಕ್ಕೆ ಸಂಬಂಧಿಸಿದ ನಿಯಮಗಳ ಪ್ರಕಾರ ಸಂಗ್ರಹಣೆಯನ್ನು ಮಾಡಬೇಕಾಗುತ್ತದೆ. ಗ್ರಾಮ ಸ್ವರಾಜ್ ಯೋಜನೆಯ ಅನುಷ್ಠಾನದಲ್ಲಿ ಸಂಗ್ರಹಣೆಯ ಕುರಿತು ಅನುಸರಿಸಬೇಕಾದ ನಿಯಮಗಳುಳ್ಳ ಸಂಗ್ರಹಣಾ ಕೈಪಿಡಿಯನ್ನು ತಯಾರಿಸಿದೆ. ಸದರಿ ಸಂಗ್ರಹಣಾ ಕೈಪಿಡಿಯ ಅನುಸಾರ ಸಂಗ್ರಹಣಾ ಕಾರ್ಯವನ್ನು ಕೈಗೊಳ್ಳಲು ಸರ್ಕಾರವು ಪರಿಗಣಿಸಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 13 ಗ್ರಾಸ್ವಯೋ, ಬೆಂಗಳೂರು, ದಿನಾಂಕ: 3ನೇ ಜನವರಿ 2007**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರವು ಗ್ರಾಮ ಸ್ವರಾಜ್ ಯೋಜನೆಯಡಿ ಸಾಮಗ್ರಿ, ಕೆಲಸ ಮತ್ತು ಸೇವೆಗಳ ಸಂಗ್ರಹಣೆಯನ್ನು ಇದಕ್ಕೆ ಲಗತ್ತಿಸಿದ ಸಂಗ್ರಹಣಾ ಕೈಪಿಡಿಯಲ್ಲಿನ ಮಾರ್ಗಸೂಚಿಗಳಂತೆ ಅನುಷ್ಠಾನ ಏಜೆನ್ಸಿಗಳು ಕೈಗೊಳ್ಳಲು ಮಂಜೂರಾತಿಯನ್ನು ನೀಡಲು ಸರ್ಕಾರವು ಹರ್ಷಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಗ್ರಾಮ ಸ್ವರಾಜ್ - ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆ - ಅಧಿಕಾರಯುಕ್ತ ಸಮಿತಿ ರಚನೆ ಕುರಿತು.

**ಪ್ರಸ್ತಾವನೆ:**

ಗ್ರಾಮ ಸ್ವರಾಜ್ ಯೋಜನೆಯ ಅನುಷ್ಠಾನವನ್ನು ಪರಿಣಾಮಕಾರಿಯಾಗಿ ಕೈಗೊಳ್ಳಲು ಹಾಗೂ ಯೋಜನೆಯ ಕಾರ್ಯಚಟುವಟಿಕೆಗಳನ್ನು ನೆರವೇರಿಸಲು ಬೇಕಾಗುವ ಎಲ್ಲಾ ಸಲಹಾತ್ಮಕ, ಕಾರ್ಯನಿರ್ವಾಹಕ ಮತ್ತು ಹಣಕಾಸಿನ ಅಧಿಕಾರಗಳನ್ನು ಹೊಂದಲು ಅಧಿಕಾರಯುಕ್ತ ಸಮಿತಿಯನ್ನು ರಚಿಸಲು ಸರ್ಕಾರವು ತೀರ್ಮಾನಿಸಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 13 ಗ್ರಾಸ್ವಯೋ, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2006**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರವು ಈ ಕೆಳಗಿನಂತೆ ಗ್ರಾಮ ಸ್ವರಾಜ್ ಯೋಜನೆಯ ಅಧಿಕಾರಯುಕ್ತ ಸಮಿತಿಯನ್ನು ರಚಿಸಲು ಹರ್ಷಿಸುತ್ತದೆ.

| ಕ್ರ.ಸಂ. | ಹುದ್ದೆ | ಸ್ಥಾನಮಾನ |
|---|---|---|
| 1. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು | ಉಪಾಧ್ಯಕ್ಷರು |
| 3. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಪ್ರಧಾನ ಕಾರ್ಯದರ್ಶಿಗಳು, ಯೋಜನೆ ಮತ್ತು ಸಾಂಖಿಕ ಇಲಾಖೆ | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಹಣಕಾಸು ಇಲಾಖೆ | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 7 | ಸರ್ಕಾರದ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ | ಸದಸ್ಯರು |

| ಕ್ರ.ಸಂ. | ಹುದ್ದೆ | ಸ್ಥಾನಮಾನ |
|---|---|---|
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 5. | ಸರ್ಕಾರದ ಕಾರ್ಯದರ್ಶಿಗಳು<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯ ಕಾರ್ಯದರ್ಶಿ |

ಮೇಲಿನ ಸಮಿತಿಯ ಪ್ರಕಾರ್ಯಗಳು ಈ ಕೆಳಗಿನಂತಿವೆ.

1. ಕನಿಷ್ಟ ಆರು ತಿಂಗಳಿಗೊಮ್ಮೆ ಸಭೆ ಸೇರುವುದು
2. ಗ್ರಾಮ ಸ್ವರಾಜ್ ಯೋಜನೆಯ ಪ್ರಗತಿ ಪರಿಶೀಲನೆಯನ್ನು ಕೈಗೊಳ್ಳುವುದು
3. ಯೋಜನೆಯ ಚಟುವಟಿಕೆಗಳನ್ನು ನೆರವೇರಿಸುವ ಸಲುವಾಗಿ ಬೇಕಾಗುವ ಎಲ್ಲ ಸಲಹಾತ್ಮಕ, ಕಾರ್ಯನಿರ್ವಾಹಕ ಹಾಗೂ ಹಣಕಾಸಿನ ಅಧಿಕಾರಗಳನ್ನು ಚಲಾಯಿಸಿ, ಸದರಿ ವಿಷಯಗಳಲ್ಲಿ ಮಂಜೂರಾತಿಯನ್ನು ನೀಡುವುದು.
4. ಯೋಜನೆಯ ಅನುಷ್ಠಾನದಲ್ಲಿ ವಿವಿಧ ಇಲಾಖೆಗಳ ಕಾರ್ಯಗಳ ಸಮನ್ವಯಗೊಳಿಸಲು ಸೂಕ್ತ ಮಾರ್ಗದರ್ಶನವನ್ನು ನೀಡುವುದು.
5. ವಿಶ್ವಬ್ಯಾಂಕಿನ ವರದಿಗಳು ಹಾಗೂ ಇತರೆ ವಿಷಯಗಳನ್ನು ಪರಿಶೀಲಿಸಿ ಸೂಕ್ತ ಮಾರ್ಗದರ್ಶನವನ್ನು ನೀಡುವುದು.
6. ಯೋಜನೆಗೆ ಸಂಬಂಧಿಸಿದ ಇತರೆ ಯಾವುದೇ ವಿಷಯಗಳು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಗ್ರಾಮ ಸ್ವರಾಜ್ - ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆ - ಅನುಷ್ಠಾನಕ್ಕಾಗಿ ರಾಜ್ಯ ಮಟ್ಟದ ಚಾಲನಾ ಸಮಿತಿ ರಚನೆ ಕುರಿತು.

**ಪ್ರಸ್ತಾವನೆ:**

ಗ್ರಾಮ ಸ್ವರಾಜ್ ಯೋಜನೆಯ ಅನುಷ್ಠಾನದಲ್ಲಿ ಮಾರ್ಗದರ್ಶನವನ್ನು ನೀಡಲು, ಮೇಲುಸ್ತುವಾರಿಯನ್ನು ಕೈಗೊಳ್ಳಲು, ಪ್ರಗತಿ ಪರಿಶೀಲನೆಯನ್ನು ಮಾಡಲು ರಾಜ್ಯ ಮಟ್ಟದಲ್ಲಿ ಚಾಲನಾ ಸಮಿತಿಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರು, ಇವರ ಅಧ್ಯಕ್ಷತೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 1 ಗ್ರಾಸ್ವಯೋ 2006, ದಿನಾಂಕ: 1.7.2006 ರಂದು ಚಾಲನಾ ಸಮಿತಿಯನ್ನು ರಚಿಸಲಾಗಿತ್ತು. ಸದರಿ ಆದೇಶವನ್ನು ಹಿಂಪಡೆದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಚಾಲನಾ ಸಮಿತಿಯನ್ನು ರಚಿಸಲು ತೀರ್ಮಾನಿಸಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ:ಗ್ರಾಅಪ 13 ಗ್ರಾಸ್ವಯೋ, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2006**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಯೋಜನೆಯ ದೈನಂದಿನ ಕಾರ್ಯಗಳು ಹಾಗೂ ವ್ಯವಹಾರಗಳ ನಿರ್ವಹಣೆ ಮತ್ತು ನಿಯಂತ್ರಣವನ್ನು ಹೊಂದಲು ಸರ್ಕಾರವು ಈ ಕೆಳಗಿನಂತೆ ಗ್ರಾಮ ಸ್ವರಾಜ್ ಯೋಜನೆಯ ರಾಜ್ಯ ಮಟ್ಟದ ಚಾಲನಾ ಸಮಿತಿಯನ್ನು ರಚಿಸಲು ಹರ್ಷಿಸುತ್ತದೆ.

| | | |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿಗಳು,<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಉಪಾಧ್ಯಕ್ಷರು |
| 3. | ಆಂತರಿಕ ಆರ್ಥಿಕ ಸಲಹೆಗಾರರು,<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 4. | ನಿರ್ದೇಶಕರು, ಪಂಚಾಯತ್ ರಾಜ್,<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |

| | | |
|---|---|---|
| 5. | ನಿರ್ದೇಶಕರು, ಗ್ರಾಮೀಣ ಮೂಲಭೂತ ಸೌಕರ್ಯಗಳು<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 6. | ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 7. | ಸರ್ಕಾರದ ಉಪ ಕಾರ್ಯದರ್ಶಿಗಳು,<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 8. | ಮುಖ್ಯಸ್ಥರು, ಗ್ರಾಮ ಸ್ವರಾಜ್ ಯೋಜನೆ<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯ ಕಾರ್ಯದರ್ಶಿ |

ಮೇಲಿನ ಸಮಿತಿಯ ಪ್ರಕಾರ್ಯಗಳು ಈ ಕೆಳಗಿನಂತಿವೆ.

1. ಕನಿಷ್ಟ ತಿಂಗಳಿಗೊಮ್ಮೆ ಸಭೆ ಸೇರಬೇಕು
2. ಗ್ರಾಮ ಸ್ವರಾಜ್ ಯೋಜನೆಯ ಪ್ರಗತಿ ಪರಿಶೀಲನೆಯನ್ನು ಕೈಗೊಳ್ಳಬೇಕು
3. ವಿಶ್ವಬ್ಯಾಂಕಿನ ವರದಿಗಳು ಹಾಗೂ ಇತರೆ ವಿಷಯಗಳನ್ನು ಪರಿಶೀಲಿಸಿ ಸೂಕ್ತ ಮಾರ್ಗದರ್ಶನವನ್ನು ನೀಡಬೇಕು.
4. ಯೋಜನೆಗೆ ಸಂಬಂಧಿಸಿದ ಇತರೆ ಯಾವುದೇ ವಿಷಯಗಳು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಪಿ.ಆರ್. 90

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಶ್ರೀ.ಜಿ.ಪಿ.ಶ್ರೀನಿವಾಸ್, ಮತ್ತಿತರರು ಸಲ್ಲಿಸಿರುವ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 905/05 - ಕರ್ನಾಟಕ ಉಚ್ಚ ನ್ಯಾಯಾಲಯವು ನೀಡಿದ್ದ ತೀರ್ಪಿನ ಅನುಷ್ಠಾನದ ಬಗ್ಗೆ ಆದೇಶ.

**ಓದಲಾಗಿದೆ:**
1) ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 36575-77/02, 36581-82/02, 36588,36594-96/02,36610- 13 & 15/02 ರಲ್ಲಿ ದಿ:27-9-2002 ರಂದು ನೀಡಿದ್ದ ತೀರ್ಪು.
2) ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅಪೀಲು ಸಂಖ್ಯೆ: 1879-1881, 1885,86,92,98-1900, 1914-1917,1919:20 02 ರಲ್ಲಿ ದಿನಾಂಕ: 1-4-2005 ರಂದು ನೀಡಿದ್ದ ತೀರ್ಪು.
3) ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 42096-42113:01 ರಲ್ಲಿ ದಿ:29-11-2001 ರಂದು ನೀಡಿದ್ದ ತೀರ್ಪು.
4) ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅಪೀಲು ಸಂಖ್ಯೆ:66-83:03ರಲ್ಲಿ 14-2-03ರಂದು ನೀಡಿದ್ದ ತೀರ್ಪು.
5) ಸರ್ವೋಚ್ಚ ನ್ಯಾಯಾಲಯವು ಎಸ್‌ಎಲ್‌ಪಿ ಸಂಖ್ಯೆ:ಸಿಸಿ 109-498/03 ರಲ್ಲಿ ದಿ:21-7-05ರಂದು ನೀಡಿದ್ದ ತೀರ್ಪು.
6) ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 905:05.
7) ಆದೇಶ ಸಂಖ್ಯೆ:ಗ್ರಾಅಪ 75 ಜಿಪಅ 01, ದಿನಾಂಕ:19-7-02.

**ಪ್ರಸ್ತಾವನೆ:**

ದಿನಾಂಕ:1-7-1984ರ ನಂತರ ದಿನಗೂಲಿ ಮೇಲೆ ನೇಮಕಗೊಂಡ ಶ್ರೀ.ಜಿ.ಪಿ.ಶ್ರೀನಿವಾಸ್, ಮತ್ತಿತರ 13 ದಿನಗೂಲಿ ನೌಕರರು ತಮ್ಮ ಸೇವಾ ಸಕ್ರಮಾತಿಗಾಗಿ ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದೆ ಸಲ್ಲಿಸಿದ್ದ ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ರಿಟ್ ಅರ್ಜಿ ಸಂಖ್ಯೆ36575-36615 ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ದಿ: 27-9-2002ರಂದು ಈ ಕೆಳಕಂಡಂತೆ ತೀರ್ಪು ನೀಡಿತ್ತು.

Both the learned counsel say that this matter is covered by the judgment of this court in WP No.42096-42113/2001 dated:29-11-2001.

Accepting the submission of the learned counsel on either side, these petitions stand disposed of in terms of the order in WP No.42096-42113/2001 dated:29-11-2001.

Ordered accordingly.

ಈ ಪ್ರಕರಣದಲ್ಲಿ ಉಚ್ಚ ನ್ಯಾಯಾಲಯದ ತೀರ್ಪನ್ನು ಪರಿಶೀಲಿಸಿ ದಿ:1-7-84ರ ನಂತರ ನೇಮಕಗೊಂಡ ದಿನಗೂಲಿ ನೌಕರರ ಸೇವಾ ಸಕ್ರಮಕ್ಕೆ ಅವಕಾಶವಿಲ್ಲವಾದ್ದರಿಂದ ಉಚ್ಚ ನ್ಯಾಯಾಲಯವು ಈ ಪ್ರಕರಣದಲ್ಲಿ ದಿ:27-9-2002ರಂದು ನೀಡಿದ್ದ ತೀರ್ಪನ್ನು ರದ್ದುಗೊಳಿಸುವಂತೆ ಕೋರಿ ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದೆ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ರಿಟ್ ಅಪೀಲು ಸಂಖ್ಯೆ: 1879-1919:02ನ್ನು ದಾಖಲಿಸಿತ್ತು.

ಈ ರಿಟ್ ಅಪೀಲ್‌ನಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ದಿ:14-2-2003ರಂದು ತೀರ್ಪು ನೀಡಿದ್ದು, ಆ ತೀರ್ಪು ಈ ಕೆಳಕಂಡಂತಿದೆ:

Dispute herein is in regard to the regularization of the services of the respondents who were the writ petitioners before the learned single Judge and they have been working on daily wages for the last several years. The learned single Judge allowed the writ petitions relying upon on an earlier decision of this Court and directed the State to consider the claims of the writ petitioners in light of the scheme framed by the Government.

The learned Government Advocate informs us that the matter regarding regularization of services of daily wagers is pending before the Supreme Court and that the matter there has been referred to a Constitution Bench of five Judges.

Since the issue is pending in the Supreme Court, we dispose of these writ appeals with a direction to the appellant. State to consider the claims of the writ petitioners for the regularization of their services after the decision of the Supreme Court and in the light of the observations and directions issued by that Court and till then, the writ petitioners/respondents shall continue in service, subject of course, to the right of the State to take disciplinary action, if necessary. No costs.

ಈಗ ಸದರಿ ರಿಟ್ ಅರ್ಜಿ ಮತ್ತು ರಿಟ್ ಅಪೀಲ್‌ಗಳಲ್ಲಿ ಒಳಗೊಂಡ 14 ಜನ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಮತ್ತು ಈ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳ ಮೇಲೆ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 905:05ನ್ನು ದಾಖಲಿಸಿದ್ದಾರೆ.

ಈ ಅರ್ಜಿದಾರರಿಗೆ ಸಂಬಂಧಪಟ್ಟ ರಿಟ್ ಅರ್ಜಿ ಸಂಖ್ಯೆ: 36575-77/02, 36581-82/02,36588,36594-96/02,36610- 13 & 15/02ರ ದಿ:27-9-02ರ ತೀರ್ಪಿನಲ್ಲಿ ಈ ಅರ್ಜಿದಾರರ ಪ್ರಕರಣಗಳನ್ನು ಉಚ್ಚ ನ್ಯಾಯಾಲಯವು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ರಿಟ್ ಅರ್ಜಿ ಸಂಖ್ಯೆ:42096-42113:01ರಲ್ಲಿ ದಿ:29-11-01ರಂದು ನೀಡಿರುವ ತೀರ್ಪಿನಂತೆ ಕ್ರಮ ಕೈಗೊಳ್ಳಲು ನ್ಯಾಯಾಲಯವು ಆದೇಶಿಸಿರುತ್ತದೆ.

ಆ ತೀರ್ಪು ಈ ಕೆಳಕಂಡಂತಿದೆ:

R2 and 3 are directed to consider the representation Annexure 'S' a nd the proposed representation to be submitted by the petitioners within 8 weeks thereafter in accordance with law and in accordance with the Judgment of this Court in W.A.Nos.5697/2000 and 6677-7351/2000 dated:24-1-2001.

Ordered accordingly.

ಮೇಲೆ ಹೇಳಲಾದ ರಿಟ್ ಅರ್ಜಿ ಸಂಖ್ಯೆ: 42096-42113:01ರಲ್ಲಿ ದಿ:29-11-01ರಲ್ಲಿ ಉಲ್ಲೇಖಿಸಿದ್ದ ರಿಟ್ ಅಪೀಲು ಸಂಖ್ಯೆ: 5697:2000, 6677-7351:2000 ರ ದಿ:24-1-2001ರ ತೀರ್ಪಿನ ವಿರುದ್ಧ ಸರ್ಕಾರವು ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್ ಎಲ್ ಪಿ ಸಲ್ಲಿಸಿದ್ದರಿಂದ, ಸರ್ಕಾರವು ದಿ:26-11-01ರ ತೀರ್ಪಿನ ವಿರುದ್ಧ ಅಪೀಲು ಸಲ್ಲಿಸಲು ನಿರ್ಧರಿಸಿ ಅಂತೆಯೇ ರಿಟ್ ಅಪೀಲು ಸಂಖ್ಯೆ: 66-83:03ನ್ನು ದಾಖಲಿಸಿತ್ತು. ಸದರಿ ರಿಟ್ ಅಪೀಲುಗಳಲ್ಲಿ ಉಚ್ಚ ನ್ಯಾಯಾಲಯದ ತೀರ್ಪಿನ ಪ್ರಮುಖ ಭಾಗ ಈ ಕೆಳಕಂಡಂತಿದೆ. ----- other identical cases are pending consideration before the Supreme Court and it is stated by the parties that they will abide by the decision of the Supreme Court ---- consequently, writ appeals are also dismissed.

It is made clear that any order passed in identical matters in the Apex Court will cover these cases also .

ಇಂತಹ ಪ್ರಕರಣಗಳಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಬಹುದಾದ ತೀರ್ಪು ಈ ಪ್ರಕರಣಕ್ಕೂ ಅನ್ವಯವಾಗುತ್ತದೆಂದು ನ್ಯಾಯಾಲಯವು ತನ್ನ ತೀರ್ಪಿನಲ್ಲಿ ಹೇಳಿರುವುದರಿಂದ ಈ ಪ್ರಕರಣದಲ್ಲಿ ಎಸ್‌ಎಲ್‌ಪಿ ಸಲ್ಲಿಸುವ ಅಗತ್ಯವಿಲ್ಲವೆಂದು ಸರ್ಕಾರವು ನಿರ್ಧರಿಸಿ ಇಂತಹ ಪ್ರಕರಣಗಳಲ್ಲಿ ಸರ್ವೋಚ್ಚ ನ್ಯಾಯಾಲಯದ ಮುಂದೆ ಬಾಕಿ ಇದ್ದ ಎಸ್ ಎಲ್‌ಪಿಗಳ ತೀರ್ಪನ್ನು ನಿರೀಕ್ಷಿಸಲಾಗುತ್ತಿತ್ತು.

ದಿ:1-7-84ರ ನಂತರ ನೇಮಕಗೊಂಡ ದಿನಗೂಲಿ ನೌಕರರ ಸೇವಾ ಸಕ್ರಮದ ಬಗೆಗಿನ ಸಾಮಾನ್ಯ ವಿಷಯ ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠದ ಐವರು ನ್ಯಾಯಾಧೀಶರ ಮುಂದಿದ್ದ ಪ್ರಕರಣಗಳನ್ನು ಸರ್ವೋಚ್ಚ ನ್ಯಾಯಾಲಯವು ವಿವರವಾಗಿ ವಿಚಾರಣೆ ನಡೆಸಿ ಅವುಗಳ ಪೈಕಿ ರಿಟ್ ಅರ್ಜಿ ಸಂಖ್ಯೆ: 42096-42113:01ರಲ್ಲಿ ದಿ:29-11-01ರಲ್ಲಿ ಉಲ್ಲೇಖಿಸಿದ್ದ ರಿಟ್ ಅಪೀಲು ಸಂಖ್ಯೆ:5697:2000,6677-7351:2000 ದಿ:24-1-2001ರ ತೀರ್ಪಿನ ವಿರುದ್ಧ ಸಲ್ಲಿಸಲಾಗಿದ್ದ ಎಸ್‌ಎಲ್‌ಪಿ ಸಂಖ್ಯೆ: ಸಿಸಿ 109-498ನ್ನು ದಿ:22-7-05ರಂದು ವಜಾ ಮಾಡಿತ್ತು. ಮತ್ತು ಉಳಿದ ಪ್ರಕರಣಗಳನ್ನು ತಾನೇ ರಚಿಸಿಕೊಂಡ ನಾಲ್ಕು ಅಂಶಗಳನ್ವಯ ಮರು ವಿಚಾರಣೆ ನಡೆಸಲು ನಿರ್ಧರಿಸಿತ್ತು. ಅವುಗಳ ಬಗ್ಗೆ ಇನ್ನು ತೀರ್ಪು ಹೊರಬಂದಿಲ್ಲ. ಆದರೆ, ರಿಟ್ ಅರ್ಜಿ ಸಂಖ್ಯೆ: 42096-42113:01ರ ದಿ:29-11-01ರತೀರ್ಪಿನಲ್ಲಿ ಉಲ್ಲೇಖಿಸಿದ್ದ ರಿಟ್ ಅಪೀಲು ಸಂಖ್ಯೆ:5697:2000,6677-7351:2000 ದಿ:24-1-2001ರ ತೀರ್ಪಿನ ವಿರುದ್ಧ ಸಲ್ಲಿಸಲಾಗಿದ್ದ ಎಸ್‌ಎಲ್‌ಪಿ ಸಂಖ್ಯೆ: ಸಿಸಿ 109-498ನ್ನು ದಿ:22-7-05ರಂದು ವಜಾ ಆಗಿ ರುವುದರಿಂದ ಅವುಗಳಲ್ಲಿ ಒಳಗೊಂಡ ಕೆಲ ಅರ್ಜಿದಾರರು ಉಚ್ಚ ನ್ಯಾಯಾಲಯದಲ್ಲಿ ನಿಂದನಾ ಅರ್ಜಿ ಸಂಖ್ಯೆ: 659:05 ಮತ್ತು

761:05ನ್ನು ದಾಖಲಿಸಿದ್ದರಿಂದ ಸರ್ಕಾರವು ಆ ಪ್ರಕರಣಗಳಲ್ಲಿ ನಿಂದನಾ ಅರ್ಜಿ ಸಲ್ಲಿಸಿದ್ದ ಅರ್ಜಿದಾರರ ಸೇವೆಯನ್ನು ಸಕ್ರಮಗೊಳಿಸಿ ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 250 ಜಿಪಅ 05, ದಿ:29-12-05ರಲ್ಲಿ ಸ್ಕೀಂ ರಚಿಸಿ ಅದರಂತೆ ನಿಂದನಾ ಅರ್ಜಿದಾರರ ಸೇವಾ ಸಕ್ರಮಗೊಳಿಸಿ ಆದೇಶ ಹೊರಡಿಸಿರುತ್ತದೆ. ಹಾಗಾಗಿ ಈ ಪ್ರಕರಣದಲ್ಲಿ ನಿಂದನಾ ಅರ್ಜಿ ಸಲ್ಲಿಸಿರುವ ಶ್ರೀ.ಜಿ.ಪಿ.ಶ್ರೀನಿವಾಸ್ ಮತ್ತಿತರ 13 ಜನ ದಿನಗೂಲಿ ನೌಕರರಿಗೆ ಸಂಬಂಧಿಸಿದಂತೆ ಅವರುಗಳ ಸೇವೆಯನ್ನು ಸಹ ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 250 ಜಿಪಅ 05, ದಿ:29-12-05ರಲ್ಲಿ ಸ್ಕೀಂನಂತೆ ಸ್ಕೀಂ ರಚಿಸಿ ಅದರಂತೆ ಇವರುಗಳ ಸೇವೆ ಸಕ್ರಮಗೊಳಿಸಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 8 ಜಿಪಅ 2006, ಬೆಂಗಳೂರು, ದಿ: 16ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರಾಜ್ಯದ ವಿವಿಧ ಜಿಲ್ಲಾ ಪಂಚಾಯತ್‌ಗಳಡಿ ಹಾಗೂ ರಾಜ್ಯ ಸರ್ಕಾರದ ಇನ್ನಿತರ ಇಲಾಖೆಗಳಲ್ಲಿ ದಿನಗೂಲಿ ಆಧಾರದ ಮೇಲೆ ನೇಮಕ ಗೊಂಡಿರುವ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-2 ರಲ್ಲಿ ನಮೂದಿಸಿರುವ ದಿನಗೂಲಿ ನೌಕರರನ್ನು ಅನುಬಂಧ-1 ರಲ್ಲಿ ನಿಗದಿಪಡಿಸಿರುವ ಷರತ್ತುಗಳಿಗೊಳಪಟ್ಟು ಮಾಸಿಕ ವೇತನ ಸಿಬ್ಬಂದಿಯಡಿ ವಿಲೀನಗೊಳಿಸಲು: ಸದರಿ ನೌಕರರು 10 ವರ್ಷ ಸೇವೆ ಪೂರೈಸಿದ ನಂತರ ಅವರುಗಳ ಸೇವೆಯನ್ನು ಸಕ್ರಮಗೊಳಿಸಲು ಸರ್ಕಾರವು ಆದೇಶಿಸಿದೆ.

ಸದರಿ ನೌಕರರು ಕರ್ತವ್ಯ ನಿರ್ವಹಿಸುತ್ತಿರುವ ಇಲಾಖೆ:ಜಿಲ್ಲಾ ಪಂಚಾಯತ್ ಗಳ ವ್ಯಾಪ್ತಿಯಲ್ಲಿ ಹಾಲಿ ಖಾಲಿ ಇರುವ ಹುದ್ದೆಗಳಲ್ಲಿ ಹಾಗೂ ಆದ್ಯತೆ ಮೇರೆಗೆ ಹಾಲಿ ಖಾಲಿ ಇರುವ ಗ್ರಾಮ ಪಂಚಾಯತ್ ಕಾರ್ಯದರ್ಶಿಗಳ ಹುದ್ದೆಗಳಲ್ಲಿ ಅವರನ್ನು ಅನುಬಂಧ-1ರಲ್ಲಿ ನಿಗದಿಪಡಿಸಿರುವ ಷರತ್ತುಗೊಳಪಟ್ಟು ಸಕ್ರಮಗೊಳಿಸತಕ್ಕದ್ದು.

ಅವರುಗಳ ಸೇವೆಯನ್ನು ಸಕ್ರಮಗೊಳಿಸುವ ಆದೇಶವನ್ನು ನೇಮಕಾತಿ ಪ್ರಾಧಿಕಾರಗಳು ಹೊರಡಿಸತಕ್ಕದ್ದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳು ಹಾಗೂ ಇಲಾಖೆಗಳು ಸಾಧ್ಯವಾದಷ್ಟು ಮಟ್ಟಿಗೆ ಮಂಜೂರಾದ ಖಾಲಿ ಹುದ್ದೆಗಳೆದುರು ಮಾತ್ರ ಇವರುಗಳ ಸೇವೆಯನ್ನು ಸಕ್ರಮಗೊಳಿಸಲು ಕ್ರಮ ಕೈಗೊಳ್ಳತಕ್ಕದ್ದು ಅನಿವಾರ್ಯವಾದಲ್ಲಿ ಮಾತ್ರ ಸೂಪನ್ಯೂಮರರಿ ಹುದ್ದೆಗಳನ್ನು ಸೃಜಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಕಾನೂನು ಇಲಾಖೆಯ ಅ.ಟಿ. ಸಂಖ್ಯೆ. 550 ಎಎಲ್‌ಎಸ್ -1:2006 ದಿ:8-2-2006,ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 91

## Annexure-1

**Scheme for implementing the order dated: 27-9-2002 of the High in Writ Petition Nos : 36575-77/02, 36581-82/02,36588,3659496/02,36610-13 & 15/02and W.A.No:1879-1881:02,1885:02, 1886:02,1892:02,1898-1900:02,1914-1917/02**

1) This scheme applies to only those daily wage employees, who were parties to the proceedings (numbering 14 ), i.e. the petitioners in Contempt Petition Nos. 905:05 pertaining to Writ Petition Nos. 36575-77/02, 36581-82/02,36588,36594-96/02,36610- 13 & 15/02 dated: 27-9-02 and W.A.No: **1879-1881, 1885,86,92,98-1900,1914-1917,1919:20 02 dated:1-4-05.** in which the High Court of Karnataka passed order (They are, hereinafter, referred to as “ Petitioners” ).

2) Accordingly, the services of the petitioners (numbering 14) will have to be considered for regularization as follows:

According to the judgement in W.A.No:5675/00,6671-7351/00 dated:24-1-01, regularization has to be done as per scheme dated:19-7-02in the following manner.

(A) Firstly, the respondents should consider the cases of such of the petitioners (appointed after 1-7-84) as are working against sanctioned posts, for regularization, subject to the conditions that they have served for a period of 10 years continuously;

(B) Secondly, in case services for the Zilla Panchayats in terms of Section 196 (5) of the Karnataka Panchayat Raj Act, 1993 have been constituted, the strength of the cadre thereof determined and the qualifications and the method recruitment there to prescribed. Such of the petitioners as do not fall under (A) above on account of the absence of sanctioned / regular vacancies shall be considered for absorption against the vacancies becoming available upon constitution of the services in accordance with the relevant recruitment Rules subject to their being eligible for such consideration and appointment. The petitioners in that case shall be entitled to relaxation of age bar to the extent of their service as daily wage employees.

(C) Thirdly, in case, however, the Government does not in terms of (B) above constitute services or the process which it initiates is not concluded within the time given by the High Court, the petitioners

shall be considered for regularization on the terms an conditions stipulated by the Government pursuant to directions of the Supreme Court in THE DHARWAD DISTRICT P.W.D. LITERATE DAILY WAGES EMPLOYEES ASSOCIATION AND OTHERS .V. STATE OF KARNATAKA AND OTHERS/AIR 1990 SC.P-883/, subject to the condition that they have been in continuous service on whole time basis for over 10 years from the date of their appointment (after 1-7-1984) till the date of the order dated. 19-10-2001 of the High Court. Conditions stipulated in the Government Orders issued for implementation of the Scheme in Dharwad Case (Supra) shall to that extent stand modified.

Accordingly, the services of the petitioners (numbering 14) will have to be considered for regularization subject to the conditions and in the manner mentioned below:-

1) They (the petitioners) should have been in continuous service on whole-time basis for over ten years from the date of their appointment till 27-9-02 (i.e. the date of the order of the Learned Single Judge);

2) Subject to the modification mentioned in item (1) above, petitioners shall be considered for regularization subject to the terms and conditions and the manner stipulated in Government Order No. DPAR 2 SLC 90 dated.6-8-1990, as explained below;

3) The petitioners may be brought on to the Monthly Rated Establishment (MRE, for short) by creating the required number of posts on a non-pension able permanent basis.

Provided they fulfill the conditions hereinafter setforth:-

a) They should have been employed and continued on whole time basis till the date of issue of this Government Order;

b) They should be within 58 years of age as on the date of this order;

c) For the above-said purpose, a petitioner may be deemed to be in continuous service:-

i) if he/ she has been in un-interrupted service, including Sundays and other General Holidays and authorized leave of absence;

or

ii) If he/she has actually worked for not less than 240 days in each of the consecutive block periods of 12 Calendar months commencing from the date of his/her appointment on daily wages. Sundays and other general holidays for which no wages may have been paid need not be construed as break;

iv) A petitioner, who did not have formal school education and who is otherwise eligible for absorption in MRE as per items (i) to (iii) above, should produce a relevant extract from the Register of Births and Deaths, along with an Affidavit duly certifying his/her date of birth. Where the date of birth is not entered in the Register of Births and Deaths , the production of an extract can be dispensed with. If he/she is not in a position to give the exact date of birth and can only state the year, then the first July of that year should be taken as date of birth. If there is a reasonable doubt regarding the date of birth, the matter may be decided after due enquiry. In respect of the other petitioners, who are otherwise eligible for absorption in MRE as per items (i) to (iii) above, their dates of birth entered in the school register shall be accepted as final;

(v) The petitioners who do not fulfill the eligibility and suitability criteria laid down above for absorption in M.R.E. shall be retrenched. All those retrenched shall be entitled to claim compensation, if any, to which they are legally entitled.

(vi) The power to discharge or retrench shall vest with the heads of the departments.

(4) Such of the petitioners as are brought on M.R.E. (Monthly Rated Establishment) in accordance with this Government Order shall be absorbed in regular service after completion of 10 years of continuous service from the date of their appointment on daily wages subject to the conditions specified at (a) and (b) below:-

(a) Absorption of the petitioners in Group ' D ' posts shall be subject to their suitability, the suitability being assessed by the Appointing Authority, mainly, on the basis of physical fitness and also on the basis of mental fitness;

(b) The petitioners doing duties of Group ' C ' posts may be absorbed in those posts subject to their fulfilling the educational qualification and other requirements prescribed in the rules of recruitment applicable to the respective posts. On absorption, their pay shall be fixed at the minimum of the scale of pay applicable to the post;

If there are no vacancies to absorb them the required number of supernumerary posts may be created. Supernumerary posts may be created by the concerned Administrative Department .

5. Conditions of service of the petitioners absorbed in M.R.E. shall be as follows:-

(a) **Salary:** Actual wages / salary received or Rs. 2500/- per month with effect from the date of absorption in MRE without any allowances. They shall also be entitled to an annual increase of Rs. 50/- per month, the first increase falling due on completion of twelve months from the date of absorption in M.R.E.

(b) **Holidays:** 10 General Holidays with salary in addition to Weekly Holidays;

(c) **Leave Benefits**:

**i) Casual Leave**: 10 days with salary in a calendar year;

**ii) Earned Leave**: one day with salary for every 22 days of work excluding the period of leave taken. Earning of leave shall start with the date of this order or from the date of absorption in M.R.E. which ever is later.

**iii)Maternity Leave** : 90 days for Female workers in terms of Rule 135 of Karnataka Civil Service Rules as applicable to the Government Servants;

**iv)Transfers** : Liable to be transferred.

**(d)Seniority** : Seniority shall be reckoned with reference to the total consecutive calendar years of work as daily wage employees taking into account only the years in which minimum of two hundred and forty days of work is done, seniority inter-se of equals being determined on the basis of age, the petitioner older in age being considered senior in the M.R.E. This is only for determining interse seniority among the petitioners regularized under this order.

**(e)Retrenchment Compensation** : 15 days average salary for each completed year of work as a daily wage employee and MRE (all put together) in the case of retrenchment.

**(f) Gratuity**: 15 days of salary based on the rate of salary last drawn for each completed year of work as daily wage employee and in the MRE (all put together) subject to maximum of 20 months wage in case of retrenchment / retirement / resignation / death. No gratuity will be payable to a petitioner who is removed for misconduct;

**(g) Age of Compulsory Retirement** : Afternoon of the last working day of the month in which the petitioner attains the age of 58 years;

(h) A worker in the MRE shall be liable for retrenchment on the principle of ' last come first go", if a reduction in the establishment is necessitated due to the non – availability of work for him in his department.

6. For the purpose of discharging or making retrenchments, prior permission of the appropriate authority prescribed under Section 25 N of the Industrial Disputes Act, 1948 and rules there under may be deemed to have been obtained by the Heads of Departments and by the State Government as and when discharging or making retrenchments is proposed and effected under this scheme.

7. Orders of regularization shall be issued by the competent appointing authorities.

8. At the time of regularization, one increment in the time scale of pay of respective posts shall be allowed by way of weightage for every unit of 5 years of service in excess of ten years.

9. As and when workers in MRE are absorbed in the regular establishment, the posts held by them in the MRE shall stand abolished. The suitability of workers in the MRE to move to the regular service shall be assessed by the Appointing authority on the basis of physical and mental fitness coupled with past record of work in the MRE.

10. On the absorption of workers belonging to the MRE in regular service, the period spent in the MRE shall count as qualifying service for pension and gratuity on the lines and to the extent indicated in Rule 248 A of Karnataka Civil Service Rules.

11.The Karnataka Civil Services (Conduct) Rules ,1966 and the Karnataka Civil services (Classification, Control and Appeal) Rules,1957 shall apply to the workers in the MRE.

**S.C. Sundar**
Under Secretary to Government (Services-A)
Rural Development & Panchayat.

**Annexure – II**
**LIST OF PETITIONERS TO WHOME**
**ORDER NO. RDP 8 ZPA 2005, DATED. 16-2-2006 IS APPLICABLE**

| | **Sri : Srimathi** |
|---|---|
| 1 | G.P. Srinivas, S/o Papanna,<br>Driver, A.E.E. Mechanical Sub-Dvn.<br>Zilla Parishat, Ananda Rao Circle, Bangalore. |
| 2 | C.B. Shivakumarswamy,<br>Driver, A.E.E. Mechanical Sub-Dvn.<br>Zilla Parishat, Ananda Rao Circle, Bangalore. |
| 3 | Ramakrishnaiah,<br>Driver, A.E.E. Mechanical Sub-Dvn.<br>Zilla Parishat, Ananda Rao Circle, Bangalore. |
| 4 | Chikka Muniyappa, S/o Thimmaiah,<br>Group-D employee,<br>T.S.C. Sericulture Department, Chikkajala, Bangalore. |
| 5 | Basavaraj,<br>S/o Shivappa Thuppad,<br>Watchman, A.E.E. Z.P. Engg. Sub-Division,<br>Kushtagi, Dist. Koppal. |
| 6 | B.G. Manjunath, S/o Giriyappagowda,<br>Watchman, T.S.C. Sericulture Department,<br>Kengeri Upanagara, Bangalore. |
| 7 | M. Surya Prakash, S/o A. Muniratnam,<br>Typist, O/o A.E.E. Z.P.E. Sub-Division,<br>Nelamangala, Bangalore. |
| 8 | L. Ramesh, S/o Laumappa,<br>Group-D Employee,<br>O/o RFO, Social Forestry, Kolar. |
| 9 | Gulnaz Begum, D/o Abdul Rahman,<br>Typist, O/o DFO Social Forestry,<br>Kolar. |
| 10 | T.R. Ratnamma, D/o Ramalaingaiah,<br>D-Group Employee, O/o Senior Assistant,<br>Director of Horticulture, Tiptur, Dist. Tumkur. |
| 11 | Sowbhagya Dakshyanamma,<br>D/o late H. Channabasappa,<br>C-Group Employee, O/o Senior Asst, Director<br>of Horticulture (ZP), Tiptur, Tumkur District. |
| 12 | Yashodamma, D/o T.S.Ramalingaiah,<br>D-Group Employee, O/o Senior Asst. Director,<br>Of Horticulture (ZP), Tiptur, Tumkur District. |
| 13 | T.V. Manjula, D/o T.C. Venkatesh Naidu,<br>D-Group Employee, O/o Senior Asst. Director,<br>Of Horticulture (ZP), Tiptur, Tumkur District. |
| 14 | S.S. Hiremath, S/o Sangaiah Hiremath,<br>C- Group Employee, T.S.C. Sericulture Department,<br>Hanumasagara, Kushtagi, Koppal District. |

**S.C. Sundar**
Under Secretary to Government
Rural Development & Panchayat Raj Department, (Services-A)

P.R.91

**ಕಂದಾಯ ಸಚಿವಾಲಯ**

**ವಿಷಯ:** ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ರಚನೆ ಕುರಿತು.

**ಪ್ರಸ್ತಾವನೆ:**

1) ಕನಕದಾಸರು ಕರ್ನಾಟಕದ ಸಾಂಸ್ಕೃತಿಕ ಲೋಕ ಕಂಡ ಅಪರೂಪದ ಚೇತನಗಳಲ್ಲಿ ಒಬ್ಬರು. ಸಮಾಜದ ಕೆಳಸ್ತರದಲ್ಲಿ ಹುಟ್ಟಿಯೂ ತನ್ನ ಸಮಾಜ, ಕಾಲ ಮತ್ತು ಪರಿಸರ ಗಳನ್ನು ಮೀರಿ ಇವರು ಮಾನವತಾವಾದಿಯಾದರು. ಕೆಳವರ್ಗದವರಿಗೆ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಆಗುತ್ತಿರುವ ಅವಮಾನ ಪರಂಪರೆಗಳನ್ನು ಕಂಡು ಅನುಭವಿಸಿ ಅವುಗಳ ಮೂಲೋತ್ಪಾಟನೆಗಾಗಿ ಶ್ರಮಿಸಿದರು. ಮನುಷ್ಯ ಉತ್ತಮನಾಗುವುದು ಹುಟ್ಟಿನಿಂದಲ್ಲ, ಸಾಧನೆಯಿಂದ ಎಂಬುದನ್ನು ಸಾಬೀತುಪಡಿಸಿದರು. ಸರ್ವ ಮತಧರ್ಮಗಳ, ಪಂಥಗಳ ಎಲ್ಲಾ ಮಾನವ ಪ್ರೇಮದ ಸದ್ಗುಣ ಪರಂಪರೆಗಳನ್ನು ಸಮನ್ವಯಗೊಳಿಸಿ ದೇಶ, ಭಾಷೆ, ಧರ್ಮಗಳ ಎಲ್ಲೆಕಟ್ಟುಗಳನ್ನು ಮೀರಿ ನಿಂತು ವಿಶ್ವಮಾನವ ಸಂದೇಶಗಳನ್ನು ಸಾರಿದರು. ಅವರ ಸಂದೇಶಗಳು, ತತ್ವಗಳು ಇಂದಿಗೂ ಅತ್ಯಂತ ಪ್ರಸ್ತುತವಾಗಿವೆ. ಮತ್ತು ವಿಶ್ವ ಭ್ರಾತೃತ್ವವನ್ನು ಪ್ರಸಾರ ಮಾಡುವ ಮಾರ್ಗದರ್ಶಕ ತತ್ವಗಳಾಗಿವೆ.

2) ಮನುಕುಲದ ಉದ್ಧಾರಕ್ಕೆ ಕನಕದಾಸರು ನೀಡಿದ ಮಹೋನ್ನತ ಸಾಧನೆಯನ್ನು ಸಾರ್ಥಕ ರೀತಿಯಲ್ಲಿ ಸಮಾಜದ ಒಳಿತಿಗೆ ಮನವರಿಕೆ ಮಾಡುವ ಅಗತ್ಯವನ್ನು ಮನಗಂಡ ಕರ್ನಾಟಕ ಸರ್ಕಾರವು ಕನಕದಾಸ ಟ್ರಸ್ಟ್ ಅನ್ನು 2002ರಲ್ಲಿ ಸ್ಥಾಪಿಸಿತ್ತು. ಆದರೆ, ಈ ಟ್ರಸ್ಟಿನ ಕಾರ್ಯವ್ಯಾಪ್ತಿ ಸೀಮಿತವಾಗಿರುವುದರಿಂದ ಮತ್ತು ಕನಕದಾಸರ ಹಾಗೂ ಅವರ ಪರಿಸರವನ್ನು ಕುರಿತಾದಂತಹ ವ್ಯಾಪಕ ನೆಲೆಯ ಅಧ್ಯಯನ, ಸಂಶೋಧನೆ, ಸಂಸ್ಕೃತಿ, ಶಿಕ್ಷಣ, ಪ್ರಸಾರ ಮತ್ತು ಅದಕ್ಕೆ ಬೇಕಾದ ಪರಿಕರಗಳ ವ್ಯವಸ್ಥೆ ವ್ಯಾಪಕವೂ ಮತ್ತು ಬಹುಮುಖಿಯೂ ಆಗಿರುವುದರಿಂದ ಈ ಎಲ್ಲಾ ಉದ್ದೇಶಗಳನ್ನು ಕ್ರಮಬದ್ಧವಾಗಿ ಮತ್ತು ಸಮಗ್ರವಾಗಿ ಈಡೇರಿಸುವ ದೃಷ್ಟಿಯಿಂದ, ಸರ್ಕಾರವು ಕೂಡಲಸಂಗಮ ಅಭಿವೃದ್ಧಿ ಮಂಡಳಿಯ ಮಾದರಿಯಲ್ಲಿ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲು ಉದ್ದೇಶಿಸಿದೆ.

3) ಈ ಹಿನ್ನೆಲೆಯಲ್ಲಿ ಒಂದು ಅಧಿನಿಯಮವನ್ನು ಹೊರಡಿಸಿ ಕಾನೂನು ರಚನೆ ಯಾಗುವವರೆಗೆ, ಕಾರ್ಯಾದೇಶದ ಮೂಲಕ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 172 ಆರ್‌ಇಹೆಚ್ 2005, ಬೆಂಗಳೂರು, ದಿನಾಂಕ: 11ನೇ ಜನವರಿ 2007**

ಕಾಗಿನೆಲೆ ಅಭಿವೃದ್ಧಿಗಾಗಿ ಅದರ ಉದ್ದೇಶ, ಯೋಜನೆ, ಆಡಳಿತ ವ್ಯವಸ್ಥೆ, ಹಣಕಾಸು ನಿರ್ವಹಣೆ ಹಾಗೂ ಶಾಸನಬದ್ಧ ಚೌಕಟ್ಟುಗಳನ್ನು ಒಳಗೊಂಡಂತೆ ಒಂದು ಅಧಿನಿಯಮವನ್ನು ಜಾರಿಗೆ ತರುವುದನ್ನು ಬಾಕಿಯಿಟ್ಟು, ಸರ್ಕಾರವು ಕಾಗಿನೆಲೆ ಅಭಿವೃದ್ಧಿಗಾಗಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿದೆ.

| | | | |
|---|---|---|---|
| 1) | ಮುಖ್ಯಮಂತ್ರಿಗಳು | - | ಅಧ್ಯಕ್ಷರು |
| 2) | ಕನ್ನಡ ಮತ್ತು ಸಂಸ್ಕೃತಿ ಸಚಿವರು | - | ಸದಸ್ಯರು |
| 3) | ಕಂದಾಯ ಸಚಿವರು | - | ಸದಸ್ಯರು |
| 4) | ಹಣಕಾಸು ಸಚಿವರು | - | ಸದಸ್ಯರು |
| 5) | ಹಾವೇರಿ ಜಿಲ್ಲೆಯ ಉಸ್ತುವಾರಿ ಸಚಿವರು | - | ಸದಸ್ಯರು |
| 6) | ಕಾಗಿನೆಲೆ ಹಾಗೂ ಬಾಡ ಗ್ರಾಮಗಳನ್ನು ಒಳಗೊಂಡ ಕ್ಷೇತ್ರವನ್ನು ಭಾಗಶ:ಅಥವಾ ಪೂರ್ಣವಾಗಿ ಪ್ರತಿನಿಧಿಸುವ ಹಾಗೂ ಅದರ ಎಲ್ಲೆಗಳೊಳಗೆ ತಮ್ಮ ಚುನಾವಣಾ ಕ್ಷೇತ್ರವನ್ನು ಹೊಂದಿರುವ ಸಂಸತ್ ಸದಸ್ಯರು ಮತ್ತು ರಾಜ್ಯ ವಿಧಾನ ಮಂಡಲದ ಸದಸ್ಯರು | - | ಸದಸ್ಯರು |
| 7) | ಅಧ್ಯಕ್ಷರು ಜಿಲ್ಲಾ ಪಂಚಾಯತಿ ಹಾವೇರಿ | - | ಸದಸ್ಯರು |
| 8) | ಸಂತ ಕವಿ ಕನಕದಾಸರು ಅಂಗೀಕರಿಸಿ ಸಾರಿದ ತತ್ವಗಳ ಅನುಷ್ಠಾನಕ್ಕಾಗಿ ದುಡಿದಂತಹ, ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಐವರಿಗೆ ಮೀರದ ಸದಸ್ಯರು, ಅವರುಗಳಲ್ಲಿ ಒಬ್ಬರು ಮುಖ್ಯ ಇಂಜಿನಿಯರ್, (ಸಿವಿಲ್) ಹುದ್ದೆಯನ್ನು ಹೊಂದಿದ್ದ ವ್ಯಕ್ತಿಯಾಗಿರತಕ್ಕದ್ದು. | - | ಸದಸ್ಯರು |
| 9) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | - | ಸದಸ್ಯರು |
| 10) | ಸರ್ಕಾರದ ಪ್ರಧಾನ ಕಾರ್ಯದರ್ಶಿ,ಕಂದಾಯ ಇಲಾಖೆ | - | ಸದಸ್ಯರು |
| 11) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಣಕಾಸು ಇಲಾಖೆ | - | ಸದಸ್ಯರು |
| 12) | ಸರ್ಕಾರದ ಪ್ರಧಾನ ಕಾರ್ಯದರ್ಶಿ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | - | ಸದಸ್ಯರು |
| 13) | ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ | - | ಸದಸ್ಯರು |
| 13) | ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ. | - | ಸದಸ್ಯರು |
| 14) | ಮುಖ್ಯ ಕಾರ್ಯನಿವಾಹಕ ಅಧಿಕಾರಿ ಕೆರೆ ಅಭಿವೃದ್ಧಿ ಪ್ರಾಧಿಕಾರ | - | ಸದಸ್ಯರು |
| 15) | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ | - | ಸದಸ್ಯರು |
| 16) | ಪರಂಪರೆ ಆಯುಕ್ತರು | - | ಸದಸ್ಯರು |
| 17) | ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | - | ಸದಸ್ಯರು |
| 18) | ಆಯುಕ್ತರು, ಪ್ರವಾಸೋದ್ಯಮ ಇಲಾಖೆ | - | ಸದಸ್ಯರು |

**ಪ್ರಸ್ತಾವನೆ:**

ಮೇಲೆ ಓದಲಾದ ಏಕ ಕಡತದಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ ಇವರು ಮಾನ್ಯ ಶಾಸಕರು, ಯಲಬುರ್ಗಾ ಕ್ಷೇತ್ರ ಇವರು ತಮ್ಮ ಹಿಂದುಳಿದ ಕ್ಷೇತ್ರವಾದ ಯಲಬುರ್ಗಾ ತಾಲ್ಲೂಕು, ತಳಕಲ್ ಗ್ರಾಮಕ್ಕೆ ಒಂದು ಮೊರಾರ್ಜಿ ದೇಸಾಯಿ ವಸತಿ ಶಾಲೆಯನ್ನು ಮಂಜೂರು ಮಾಡಬೇಕೆಂದು ಮನವಿ ಮಾಡಿರುತ್ತಾರೆ ಎಂದು ತಿಳಿಸಿ 2006-07ನೇ ಲೆಕ್ಕ ಶೀರ್ಷಿಕೆ 2225-03-277-2-63 ರಡಿಯಲ್ಲಿ ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಿಗಾಗಿ ರೂ.100-00 ಲಕ್ಷಗಳನ್ನು ಒದಗಿಸಿದೆ. ಸದರಿ ಅನುದಾನದಲ್ಲಿ ರೂ.40-00 ಲಕ್ಷದಿಂದ 50-00 ಲಕ್ಷ ಉಳಿತಾಯವಾಗುವ ಸಾಧ್ಯತೆ ಇರುವುದರಿಂದ ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ದಿ:30.6.2006ರ ಸರ್ಕಾರಿ ಆದೇಶದಲ್ಲಿ 2006-07ನೇ ಸಾಲಿಗೆ 5 ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಈಗಾಗಲೇ ಮಂಜೂರು ಮಾಡಲಾಗಿರುತ್ತದೆ. ಇದನ್ನು ಹೊರತುಪಡಿಸಿ ಈಗ ಹೆಚ್ಚುವರಿಯಾಗಿ ಯಲಬುರ್ಗಾ ತಾಲ್ಲೂಕಿನ ತಳಕಲ್ ಗ್ರಾಮದಲ್ಲಿ ಒಂದು ಹೆಚ್ಚುವರಿ ಮೊರಾರ್ಜಿ ದೇಸಾಯಿ ವಸತಿ ಶಾಲೆಯನ್ನು 2006-07ರಲ್ಲಿ ಪ್ರಾರಂಭಿಸಬಹುದು. ಎನ್ನಲಾಗಿದೆ. ಆದಕಾರಣ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 167 ಅಸಂಯೋ 2006, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ತಳಕಲ್ ಗ್ರಾಮದಲ್ಲಿ 2006-07ನೇ ಸಾಲಿನಲ್ಲಿ ಒಂದು ಹೊಸ ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ವಸತಿ ಶಾಲೆಯನ್ನು ಆಂಗ್ಲ ಮಾಧ್ಯಮದಲ್ಲಿ ಪ್ರಾರಂಭಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

ಈ ವೆಚ್ಚವನ್ನು 2006-07ನೇ ಸಾಲಿನ ಲೆಕ್ಕ ಶೀರ್ಷಿಕೆಯಡಿ 2225-03-277-2-63 ರಲ್ಲಿ ಉಳಿತಾಯವಾಗುವ ಅನುದಾನದಿಂದ ಭರಿಸತಕ್ಕದ್ದು.

ಈ ವಸತಿ ಶಾಲೆಗೆ ಬೇಕಾದ ಸಿಬ್ಬಂದಿಗಳ ಮತ್ತು ಇತರೆ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳ ಕುರಿತು ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಘಟನೋತ್ತರ ಅನುಮೋದನೆಯನ್ನು ಕಾಯ್ದಿರಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಬಾಟೆ**

ಪಿ.ಆರ್. 281

ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 2 ಪೊಸಿಅ 2007, ಬೆಂಗಳೂರು, ದಿನಾಂಕ: 31ನೇ ಜನವರಿ 2007**

ಸರ್ಕಾರದ ಆದೇಶ ಸಂಖ್ಯೆ: ಒಇ 268 ಪೊಸಿಅ 2006, ದಿನಾಂಕ: 21.8.2006ರಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 285(4)(ಬಿ) ರಡಿಯಲ್ಲಿ ಕಡ್ಡಾಯ ನಿವೃತ್ತಿಗೊಳಿಸಿರುವ ಹದಿಮೂರು ಪೊಲೀಸ್ ಸಿಬ್ಬಂದಿಗಳ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 10ರಲ್ಲಿ ನಮೂದಿಸಿರುವ "ಶ್ರೀ ಎನ್.ಎಸ್. ಶಿರೋಳ ಪೊಲೀಸ್ ಇನ್ಸ್‌ಪೆಕ್ಟರ್ ಡಿಸಿಐಬಿ, ಗದಗ ಜಿಲ್ಲೆ" ಇವರ ಕುರಿತಂತೆ ಗ್ರೂಪ್-ಬಿ ವೃಂದದ ಪರಾಮರ್ಶಕ ಸಮಿತಿ (Screening Committee) ಪರಿಗಣಿಸಬೇಕಾಗಿರುವುದರಿಂದ, ಇವರ ಹೆಸರನ್ನು ಸದರಿ ಆದೇಶದಿಂದ ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 283

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ರಾಜ್ಯದಲ್ಲಿ 4ನೇ ಸಣ್ಣ ನೀರಾವರಿ ಗಣತಿಯನ್ನು ಯಶಸ್ವಿಯಾಗಿ ನಡೆಸಿ ಗಣತಿಯ ಕೆಲಸವನ್ನು ಮುಕ್ತಾಯಗೊಳಿಸುವ ಸಲುವಾಗಿ ರಾಜ್ಯ ಮಟ್ಟದ ಹಾಗೂ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸುವ ಬಗ್ಗೆ ಹಾಗೂ ಯೋಜನೆಯ ಗಣತಿ ಕಾರ್ಯಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:**

1. ಭಾರತ ಸರ್ಕಾರದ ಜಲಸಂಪನ್ಮೂಲ ಮಂತ್ರಾಲಯದ ನಿರ್ದೇಶಕರ ದಿನಾಂಕ:05.12.2006ರ ಪತ್ರ ಸಂ:1-13/2001 -ಎಂಐ(ಸ್ಟ್ಯಾಟ್)/1061.
2. ಸರ್ಕಾರದ ಆದೇಶ ಸಂ:ಸನೀಇ 118 ಮಸಾವಿ 2006, ದಿನಾಂಕ:24.11.2006.
3. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿ:7.12.06ರ ಪತ್ರ ಸಂ:ಮುಅ/ಸನೀ (ದ)/ಅಂಸಂವಿ/28/2006-07/2373.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಜಲಸಂಪನ್ಮೂಲ ಮಂತ್ರಾಲಯ, ಭಾರತ ಸರ್ಕಾರ ರವರು 4ನೇ ಗಣತಿಯನ್ನು 2007-08ನೇ ಸಾಲಿನಲ್ಲಿ ಒಟ್ಟು ರೂ.137.88 ಲಕ್ಷಗಳ ಅಂದಾಜಿನಲ್ಲಿ ನಡೆಸಲು ಆಡಳಿತಾತ್ಮಕ ಅನುಮೋದನೆ ನೀಡಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮುಖ್ಯ ಇಂಜಿನಿಯರ್, ಸಣ್ಣನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರನ್ನು 4ನೇ ಸಣ್ಣ ನೀರಾವರಿ ಗಣತಿಯ ಆಯುಕ್ತರನ್ನಾಗಿ ನೇಮಿಸಲಾಗಿದೆ.

ರಾಜ್ಯದ 4ನೇ ಸಣ್ಣ ನೀರಾವರಿ ಗಣತಿ ಕಾರ್ಯವನ್ನು ಕ್ರಮಬದ್ಧವಾಗಿ ಹಾಗೂ ಯಶಸ್ವಿಯಾಗಿ ನಡೆಸಲು ಸೂಕ್ತ ಮಾರ್ಗದರ್ಶನ ಹಾಗೂ ಕಾರ್ಯಕ್ರಮದ ಪರಿಶೀಲನೆಯ ಅಗತ್ಯವಿದ್ದು ರಾಜ್ಯಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ಸಮನ್ವಯ ಸಮಿತಿಗಳನ್ನು ರಚಿಸಬೇಕಾಗಿದೆ ಎಂದು ಮುಖ್ಯ ಇಂಜಿನಿಯರ್, ಸಣ್ಣನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಮನ್ವಯ ಸಮಿತಿಯನ್ನು ಹಾಗೂ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 118 ಮಸಾವಿ 2006, ಬೆಂಗಳೂರು, ದಿನಾಂಕ: 27ನೇ ಜನವರಿ 2007**

ರಾಜ್ಯದಲ್ಲಿ 2007-08ನೇ ಸಾಲಿನಲ್ಲಿ ಒಟ್ಟು ಅಂದಾಜು ಮೊತ್ತ ರೂ. 137.88 ಲಕ್ಷಗಳಿಗೆ (ಒಂದು ನೂರ ಮೂವತ್ತೇಳು ಲಕ್ಷ ಎಂಭತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಮೀರದಂತೆ ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ ಸಣ್ಣ ನಿರಾವರಿ ಯೋಜನೆಗಳ 4ನೇ ಗಣತಿಯನ್ನು ಕೈಗೆತ್ತಿಕೊಳ್ಳಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 4ನೇ ಸಣ್ಣ ನೀರಾವರಿ ಗಣತಿಯನ್ನು ಕ್ರಮಬದ್ಧವಾಗಿ ಮತ್ತು ಯಶಸ್ವಿಯಾಗಿ ಸೂಕ್ತ ಮಾರ್ಗದರ್ಶನ ನೀಡಲು ಹಾಗೂ ನಿಯತಕಾಲಿಕವಾಗಿ ಪರಿಶೀಲನೆ ನಡೆಸಲು ಈ ಕೆಳಗೆ ನಮೂದಿಸಿರುವ ಅಧಿಕಾರಿಗಳನ್ನೊಳಗೊಂಡಂತೆ ರಾಜ್ಯ ಮಟ್ಟದ ಸಮನ್ವಯ ಸಮಿತಿಯನ್ನು ಹಾಗೂ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ಸರ್ಕಾರವು ರಚಿಸಿದೆ.

**ರಾಜ್ಯ ಮಟ್ಟದ ಸಮನ್ವಯ ಸಮಿತಿ**

| | | | |
|---|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು | - | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಪ್ರಧಾನ ಕಾರ್ಯದರ್ಶಿಗಳು, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ | - | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | - | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | - | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | - | ಸದಸ್ಯರು |
| 6. | ಸರ್ಕಾರದ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ | - | ಸದಸ್ಯರು |
| 7. | ಸರ್ಕಾರದ ಕಾರ್ಯದರ್ಶಿಗಳು, ಜಲಸಂಪನ್ಮೂಲ ಲಾಖೆ (ಸಣ್ಣ ನೀರಾವರಿ) | - | ಸದಸ್ಯರು |
| 8. | ಪ್ರಧಾನ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರ್, ವಿಭಾಗ | - | ಸದಸ್ಯರು |
| 9. | ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ | - | ಸದಸ್ಯರು |
| 10. | ಮುಖ್ಯ ಇಂಜನಿಯರ್ (ಸಾಮಾನ್ಯ), ಕೆಪಿಟಿಸಿಎಲ್ | - | ಸದಸ್ಯರು |
| 11. | ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ | - | ಸದಸ್ಯರು |
| 12. | ಮುಖ್ಯ ಇಂಜಿನಿಯರ್ ಹಾಗೂ ಗಣತಿ ಆಯುಕ್ತರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು | - | ಸದಸ್ಯರು |
| 13. | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ | - | ಸದಸ್ಯರು |
| 14. | ಜಂಟಿ ನಿರ್ದೇಶಕರು (ಸಾಂಖ್ಯಿಕ ಕೋಶ) ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು | - | ಸದಸ್ಯ ಕಾರ್ಯದರ್ಶಿ |

ರಾಜ್ಯ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಲಾಗಿದೆ.

**ಜಿಲ್ಲಾ ಮಟ್ಟದ ಸಮನ್ವಯ ಸಮಿತಿ**

| | | | |
|---|---|---|---|
| 1. | ಜಿಲ್ಲಾಧಿಕಾರಿಗಳು | - | ಅಧ್ಯಕ್ಷರು |
| 2. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು | - | ಉಪಾಧ್ಯಕ್ಷರು |
| 3. | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು | - | ಸದಸ್ಯರು |
| 4. | ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರ್ ವಿಭಾಗ | - | ಸದಸ್ಯರು |
| 5. | ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ | - | ಸದಸ್ಯರು |
| 6. | ಜಿಲ್ಲಾ ಮಟ್ಟದ ಅಧಿಕಾರಿಗಳು, ಕೆಪಿಟಿಸಿಎಲ್ | - | ಸದಸ್ಯರು |
| 7. | ಜಿಲ್ಲಾ ಮಟ್ಟದ ಅಧಿಕಾರಿಗಳು, ಜಲಸಂಪನ್ಮೂಲ ಇಲಾಖೆ | - | ಸದಸ್ಯರು |
| 8. | ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ | - | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 284

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ. ನರಸಪ್ಪ ಸರ್ಕಾರಿ ಅಭಿಯೋಜಕರು, ಹಾಸನ ಇವರ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ:**

1. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇಲಾಖೆ ಇವರ ಪತ್ರ ಸಂಖ್ಯೆ ಡಿಪಿಎನ್: ಸಿಕೆಎಂ-241/2001 ದಿನಾಂಕ: 21.5.2001.
2. ಕಾರಣ ಕೇಳುವ ತಿಳುವಳಿಕೆ ಪತ್ರ ಸಂ:ಲಾ 186 ಪಿಪಿಇ 2001 ದಿನಾಂಕ: 31.5.2002.
3. ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ 27.6.2002.
4. ಸರ್ಕಾರಿ ಆದೇಶ ಸಂಖ್ಯೆ ಲಾ 186 ಪಿಪಿಇ 01 ದಿನಾಂಕ 6.5.2003.
5. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ಸಂ.ಲಾ/ಸಿಎನ್ಓ 78/2004 ದಿನಾಂಕ: 19.5.2004.
6. ಶಿಸ್ತು ಪ್ರಾಧಿಕಾರಿಯವರ ನಿರ್ಣಯ ದಿನಾಂಕ: 21.8.2004.
7. 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂ: ಒಇ 716 ಪಿಪಿಇ 2005 ದಿನಾಂಕ: 27.1.2006.
8. ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ: 22.8.2006.

**ಪ್ರಸ್ತಾವನೆ:**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರು ಚಿಕ್ಕಮಗಳೂರಿನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಅಪರ ಸರ್ಕಾರಿ ಅಭಿಯೋಜಕವಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಕರಣ ಎಸ್.ಸಿ. ಸಂಖ್ಯೆ 124/99ನ್ನು ನ್ಯಾಯಾಲಯದಲ್ಲಿ ನಡೆಸುವಾಗ ಸದರಿ ಪ್ರಕರಣದಲ್ಲಿ ನಾಲ್ಕು ಮಂದಿ ಅಮಾನುಷವಾಗಿ ಕೊಲೆಯಾಗಿದ್ದು ಆರೋಪಿತರಿಂದ ಜಪ್ತಿಮಾಡಿದ ರಕ್ತಹತ್ತಿದ ಬಟ್ಟೆಗಳನ್ನು ಮತ್ತು ಮೃತಳಿಗೆ ಸೇರಿದ ಕರಿಮಣಿ ಗುಂಡುಗಳನ್ನು ಗುರುತಿಸಿರುವುದಿಲ್ಲ. ಇದಲ್ಲದೇ ಮರಣೋತ್ತರ ಪರೀಕ್ಷೆಯ ಪರೀಕ್ಷೆಯ ವರದಿಗಳನ್ನು, ಎಫ್.ಎಸ್.ಎಲ್. ಮತ್ತು ಸಿರಾಲಜಿಸ್ಟ್ ವರದಿಗಳನ್ನು ಗುರುತಿಸಿರುವುದಿಲ್ಲ. ಹಾಗೂ ವೈದ್ಯಾಧಿಕಾರಿಗಳನ್ನು ಪರೀಕ್ಷಿಸಿರುವುದಿಲ್ಲ. ಇಂತಹ ಗಂಭೀರ ಸ್ವರೂಪದ ಪ್ರಕರಣಗಳಲ್ಲಿ ಜಪ್ತಿಮಾಡಿದ ವಸ್ತುಗಳ ಆಧಾರದ ಮೇಲೆಯೇ ಮೊಕದ್ದಮೆಯು ರುಜುವಾತಾಗಬೇಕಿದ್ದು ಇಂತಹ ಪ್ರಸಂಗಗಳಲ್ಲಿ ಜಪ್ತಾದ ವಸ್ತುಗಳನ್ನು ಹಾಗೂ ದಾಖಲೆಗಳನ್ನು ಗುರುತಿಸದೇ ಕರ್ತವ್ಯಲೋಪ ಎಸಗಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ(ii) ಮತ್ತು (iii)ವನ್ನು ಸ್ಪಷ್ಟವಾಗಿ ಉಲ್ಲಂಘಿಸಿದ ಆರೋಪದ ಬಗ್ಗೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ 2ರಲ್ಲಿ ಓದಲಾಗಿರುವ ದಿನಾಂಕ: 31.5.02ರ ಪತ್ರದಲ್ಲಿ ಎಂ. ನರಸಪ್ಪ ಸರ್ಕಾರಿ ಅಭಿಯೋಜಕರು, ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋ.ಪಟ್ಟಿ ಅನುಬಂಧ-1ರಿಂದ 4ರ ವರೆಗೆ ಜಾರಿಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿದ್ದಿತು.

ಮೇಲೆ ಕ್ರಮಾಂಕ 3ರಲ್ಲಿ ಓದಲಾಗಿರುವ ದಿನಾಂಕ: 27.6.02ರಲ್ಲಿ ಆರೋಪಿ ಸರ್ಕಾರಿ ಅಧಿಕಾರಿ ಶ್ರೀ ಎಂ. ನರಸಪ್ಪ ಇವರು ತಮ್ಮ ಲಿಖಿತ ಪ್ರತಿವಾದದ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಆರೋಪಗಳನ್ನು ನಿರಾಕರಿಸಿ, ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಲಾಗಿದೆ ಮತ್ತು ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i) ರ ಉಪನಿಯಮ (ii) ಮತ್ತು (iii) ವನ್ನು ಉಲ್ಲಂಘಿಸಿರುವುದಿಲ್ಲ ಮತ್ತು ದುರ್ನಡತೆ ಎಸಗಿರುವುದಿಲ್ಲವೆಂದು ತಮ್ಮ ಮೇಲೆ ಮಾಡಲಾಗಿರುವ ಆರೋಪಗಳನ್ನು ನಿರಾರಿಸಿರುತ್ತಾರೆ.

ಮೇಲೆ ಕ್ರಮಾಂಕ 4ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳ ಸತ್ಯಾಸತ್ಯತೆಯ ಬಗ್ಗೆ ತಿಳಿಯಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)(ಸಿ)ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯವರನ್ನು ನೇಮಿಸಿದ್ದು, ವಿಚಾರಣಾಧಿಕಾರಿಯವರು ತಮ್ಮ ವರದಿಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ನೀಡಿರುತ್ತಾರೆ.

ಆದರೆ ಮೇಲೆ ಕ್ರಮಾಂಕ 5ರಲ್ಲಿ ಓದಲಾಗಿರುವ ಶಿಸ್ತು ಪ್ರಾಧಿಕಾರಿಯಾದ ಅಂದಿನ ಕಾನೂನು ಇಲಾಖೆಯ ಕಾರ್ಯದರ್ಶಿಯವರು ಅವರ ನಿರ್ಣಯ ವೈದ್ಯಾಧಿಕಾರಿ, ತನಿಖಾಧಿಕಾರಿ, ಎಫ್‌ಎಸ್‌ಎಲ್ ನಿಪುಣ ಸಾಕ್ಷಿಗಳು, ಸಿರಾಲಜಿ ಮರಣೋತ್ತರ ವರದಿಗಳನ್ನು ಪರೀಕ್ಷಿಸದಿರುವುದು (ವಿಚಾರಣೆ ಮಾಡದಿರುವುದು) ಜಪ್ತಿ ಮಾಡಿದ ವಸ್ತುಗಳನ್ನು ಗುರುತಿಸದಿರುವುದು ದುರ್ನಡತೆ ಆಗದಿದ್ದರೆ ಮತ್ತೇನು ದುರ್ನಡತೆ ಆಗುತ್ತದೆ ಎಂಬ ನಿರ್ಣಯಕ್ಕೆ ಬಂದು, ಇಲಾಖಾ ವಿಚಾರಣಾ ವರದಿಯ ನಿಷ್ಕರ್ಷೆಯಿಂದ ಭಿನ್ನ ಅಭಿಪ್ರಾಯವನ್ನು ತಳೆದು, ತಮ್ಮ ಅಭಿಪ್ರಾಯದಲ್ಲಿ ಆರೋಪ ಸಾಭೀತಾಗಿರುತ್ತದೆ ಎಂಬ ನಿರ್ಣಯಕ್ಕೆ ಬಂದಿರುತ್ತಾರೆ.

ಮೇಲೆ (6)ರಲ್ಲಿ ಓದಲಾಗಿರುವ 27.1.2006ರ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಹಾಗೂ ವಿಚಾರಣಾ ವರದಿಯ ಮೇಲೆ ಶಿಸ್ತಿನ ಪ್ರಾಧಿಕಾರಿಯು ಕೈಗೊಂಡ ನಿರ್ಣಯದ ಪ್ರತಿಯನ್ನು ಆರೋಪಿತ ಸರ್ಕಾರಿ ಅಧಿಕಾರಿಗೆ ಒದಗಿಸಿ ಅವರ ಹೇಳಿಕೆಯನ್ನು ನೀಡಲು 30 ದಿನಗಳ ಕಾಲಾವಕಾಶವನ್ನು ನೀಡಲಾಗಿತ್ತು.

ಮೇಲೆ (7)ರಲ್ಲಿ ಓದಲಾಗಿರುವ ದಿನಾಂಕ: 22.8.2006ರಂದು ಆರೋಪಿತ ಸರ್ಕಾರಿ ಅಧಿಕಾರಿಯು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ ಈ ಪ್ರಕರಣದಲ್ಲಿ ತಾನು ಉದ್ದೇಶಪೂರ್ವಕವಾಗಿ ಯಾವುದೇ ನ್ಯೂನತೆ, ಕೊರತೆ ಅಥವಾ ದುರ್ನಡತೆಯನ್ನು ಎಸಗಿರುವುದಿಲ್ಲ. ಇನ್ನು ಮುಂದೆ ಇಂತಹ ಪ್ರಸಂಗಗಳು/ಪ್ರಮಾಧಗಳು ಉದ್ಭವಿಸದಂತೆ ಸೂಕ್ತ ಎಚ್ಚರಿಕೆಯನ್ನು ವಹಿಸಲಾಗುವುದು. ಇನ್ನು ಮುಂದೆ ಸುಧಾರಿಸಿಕೊಂಡು ಕರ್ತವ್ಯವನ್ನು ನಿರ್ವಹಿಸಲು ಸೂಕ್ತ ಕಾಲಾವಕಾಶವನ್ನು ಕೊಡಬೇಕೆಂದು ಮತ್ತು ಮುಂದಿನ ಕ್ರಮವನ್ನು ಕೈಬಿಡಬೇಕೆಂದು ಕೋರಿರುತ್ತಾರೆ.

ಆರೋಪಿತ ಸರ್ಕಾರಿ ಅಧಿಕಾರಿಯು ಸಲ್ಲಿಸಿರುವ ಉತ್ತರವು ಸಮರ್ಥನೀಯವಾಗಿರುವುದಿಲ್ಲ. ಆದಕಾರಣ ಸದರಿ ರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(2)ರ ಅಡಿಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯು ಧಾರಣೆ ಮಾಡಿರುವ ಹುದ್ದೆಯ ವೇತನ ಶ್ರೇಣಿ ರೂ. 9580-260-10880-320-13440ರ ಕನಿಷ್ಠ ಹಂತಕ್ಕೆ ಇಳಿಸಿ ಕೂಡಲೆ ಜಾರಿಗೆ ಬರುವಂತೆ ಮತ್ತು ಎರಡು ವರ್ಷ ಅವಧಿಗೆ ವಿಧಿಸುವ ಬಗ್ಗೆ ನೇಮಕಾತಿ ಪ್ರಾಧಿಕಾರಿ ಮತ್ತು ಶಿಸ್ತಿನ ಪ್ರಾಧಿಕಾರಿ ನಿರ್ಣಯಿಸಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 716 ಪಿಪಿಇ 2005, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2007**

ಶ್ರೀ ಎಂ. ನರಸಪ್ಪ ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಗಳು ಸಾಭೀತಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(2)ರ ಅಡಿಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯ ಧಾರಣೆ ಮಾಡಿರುವ ಹುದ್ದೆಯ ವೇತನ ಶ್ರೇಣಿ ರೂ. 9580-260-10880-320-13440ರ ಕನಿಷ್ಟ ಹಂತ ರೂ.9580/-ಕ್ಕೆ ಎರಡು ವರ್ಷಗಳ ಅವಧಿಗೆ ಇಳಿಸುವ ದಂಡನೆಯನ್ನು ಕೂಡಲೇ ಜಾರಿಗೆ ಬರುವಂತೆ ವಿಧಿಸಲಾಗಿದೆ. ದಂಡನೆ ಜಾರಿ ಇರುವ ಅವಧಿಯಲ್ಲಿ ಸಂಭವಿಸುವ ವಾರ್ಷಿಕ ವೇತನ ಬಡ್ತಿ ಪಡೆಯಲು ಸದರಿ ಅಧಿಕಾರಿಯು ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 287

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ರಾಜ್ಯದ ಮಠ ಮಾನ್ಯಗಳಲ್ಲಿರುವ ತಾಳೆಗರಿ ಹಸ್ತಪ್ರತಿಗಳ ಸಂರಕ್ಷಣೆ - ವಿದ್ವಾಂಸರ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 12 ರಾಪಸ 2006 ದಿನಾಂಕ: 28.12.2006.
2. ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಎಆರ್‌ಎಸ್ 27 ಎಡಿಎಂ 06 ದಿನಾಂಕ: 21.10.2006.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯಾದ್ಯಂತ ಮಠ ಮಾನ್ಯಗಳಲ್ಲಿ ಹಾಗೂ ಹಲವು ಮನೆತನಗಳಲ್ಲಿ ತಾಳೆಗರಿ ಹಸ್ತಪ್ರತಿಗಳನ್ನು ಸಂರಕ್ಷಿಸುವ ಹಾಗೂ ಪರಿಷ್ಕರಿಸುವ ಕ್ರಿಯಾ ಯೋಜನೆಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 28.12.2006ರ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಯಿತು. ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರು ಮೇಲೆ 2ರಲ್ಲಿ ಓದಲಾದ ದಿನಾಂಕ: 21.10.2006ರ ತಮ್ಮ ಪತ್ರದಲ್ಲಿ ಸದರಿ ಕ್ರಿಯಾ ಯೋಜನೆಯನ್ನು ಕಾರ್ಯಗತಗೊಳಿಸುವ ಸಲುವಾಗಿ ಈ ಕ್ಷೇತ್ರದಲ್ಲಿ ದುಡಿದ ವಿಶ್ವ ವಿದ್ಯಾನಿಲಯಗಳ ಹಾಲಿ ಮತ್ತು ನಿವೃತ್ತ ಪ್ರೊಫೆಸರುಗಳ ಸೇವೆಯನ್ನು ತಯಾರಿಸಿ ಸಲ್ಲಿಸಲಾದ ವಿದ್ವಾಂಸರ ಸಮಿತಿಯನ್ನು ನೇಮಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: 26 ರಾಪಸ 2006, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2007**

ರಾಜ್ಯಾದ್ಯಂತ ಮಠ ಮಾನ್ಯಗಳಲ್ಲಿ ಹಾಗೂ ಪುರಾತನ ಮನೆಗಳಲ್ಲಿ ಲಭ್ಯವಿರುವ ತಾಳೆಗರಿ ಹಾಗೂ ಹಸ್ತಪ್ರತಿಗಳನ್ನು ಆಯ್ದು ಸಂರಕ್ಷಿಸುವ, ಪ್ರಕಟಿಸುವ ಸಲುವಾಗಿ ಈ ಕೆಳಕಂಡ ವಿದ್ವಾಂಸರ ಸಲಹಾ ಸಮಿತಿಯನ್ನು ಈ ಮೂಲಕ ರಚಿಸುತ್ತದೆ.

| | | |
|---|---|---|
| 1. | ಪ್ರೊ: ಎಂ.ಎಂ. ಕಲಬುರ್ಗಿ, ಸೌಜನ್ಯ, 9ನೇ ಕ್ರಾಸ್, ಕಲ್ಯಾಣನಗರ, ಧಾರವಾಡ. | ಅಧ್ಯಕ್ಷರು |
| 2. | ಪ್ರೊ: ಬಸವಾರಾಧ್ಯ, ನಿವೃತ್ತ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರು, 743, 12ನೇ ಮೈನ್, 3ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10. | ಸದಸ್ಯರು |
| 3. | ಪ್ರೊ: ಎಫ್.ಟಿ. ಹಳ್ಳಿಕೇರಿ, ಕನ್ನಡ ಅಧ್ಯಯನ ಸಂಸ್ಥೆ, ಹಂಪಿ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ | ಸದಸ್ಯರು |
| 4. | ಪ್ರೊ: ವೀರಣ್ಣರಾಜು, ಕನ್ನಡ ಅಧ್ಯಯನ ಪೀಠ, ಧಾರವಾಡ | ಸದಸ್ಯರು |
| 5. | ಪ್ರೊ: ಎಸ್. ಶಿವಣ್ಣ, ನಿವೃತ್ತ ಪ್ರಾಧ್ಯಾಪಕರು, ಕನ್ನಡ (ಹಂಪಿ ವಿಶ್ವವಿದ್ಯಾಲಯ) ಬೆಂಗಳೂರು | ಸದಸ್ಯರು |
| 6. | ಪ್ರೊ: ವೈ.ಸಿ. ಬಾನುಮತಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು | ಸದಸ್ಯರು |
| 7. | ಪ್ರೊ: ಗೀತಾಚಾರ್ಯ, ಬಿ.ಎಂ. ಶ್ರೀ ಪ್ರತಿಷ್ಠಾನ, ಬೆಂಗಳೂರು | ಸದಸ್ಯರು |
| 8. | ಡಾ॥ ದೇವಕಿ, ನಿರ್ದೇಶಕಿ, ಓರಿಯಂಟಲ್ ರಿಸರ್ಚ್ ಇನ್ಸಿಟಿಟ್ಯೂಟ್, ಮೈಸೂರು | ಸದಸ್ಯರು |
| 9. | ಶ್ರೀಮತಿ ಉಷಾಸುರೇಶ್, ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 288

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## PERSONNEL AND ADMINISTRATIVE REFORMS SECRETARIAT

**Sub:** Grant of Promotion to Sri Ashok V. David and Sri M.G. Halappanavar to the Above Super Time Scale of IAS consequent upon revision of inter-se seniority and year of allotment in the IAS.

**Read:**
1) Government of India, DOPT, New Delhi's Notification No.14015/11/2006-AIS-I-B, dated: 18.9.2006.
2) Letter No. 14014/27/2006-AIS-I, dated 19.10.2006 of Government of India, DOPT, New Delhi.
3) Representation dated 21.10.2006 & 03.11.2006 of Sri Ashok V. David, IAS, MDHGML, Bangalore & Sri M.G. Halappanavar, IAS (Retd.), Former Secretary to Government, Food Proceessing and Haveri Technology, Bangalore.

**Preamble:**

Sri Ashok V. David & Sri M.G. Halappanavar, IAS (KN 79) were appointed from Karnataka Administrative Service to the IAS in the year 1987 under IAS (Recruitment Rules) and IAS (Appointment by Promotion) Regulations & they were assigned 1983 as the year allotment in the IAS under the IAS (Regulation of Seniority Rules) by the Central Government. The said officers filed O.A.s/Writ Petition in the CAT, Bangalore and High Court of Karnataka challenging the date of appointment, seniority and year of allotment in the IAS. The High Court of Karnataka in its Order dated 23.3.2005 passed in Writ Petition No. 23666/2001 has issued the following directions:-

"We allow OA No. 302 of 1997. Mandamus shall issue to the respondents to include the name of the petitioner in the zone of consideration at an appropriate place in terms of the provisions of Regulation 5, particularly, the 3rd proviso to sub-regulation (2) of Regulation 5 and assess the relative merit by

applying the standards and/or norms prescribed and applicable. After such exercise, if the petitioner is found fit for selection and appointment to IAS against any one of six vacancies that arose in the year 1983, then, the petitioner should be appointed to IAS and fitted against one of the vacancies and grant ppropriate year of allotment. In that avent, the petitioner is also entitled to all benefits, pecuniary or otherwise, flowing from his appointment to IAS in the year 1983."

The entire matter was examined by the Government of Karnataka in consultation with the UPSC and the Central Government. As per the proposals sent by the State Government to the UPSC, New Delhi, a meeting of the review Selection Committee was convened by the UPSC on 06.06.2006 to review the case of Sri Ashok V.David, IAS and Sri M.G. Halappanavar, IAS for inclusion in the select list of 1983 for promotion to IAS against promotional vacancies available as on 1983, in compliance with the order dated 23.3.2005 of the High Court of Karnataka. The select list prepared by the review Selection Committee was approved by UPSC on 7.9.2006 after consulting the State Government and the Central Government. Consequently the Government of India, DOPT, New Delhi issued a Notification dated 18.9.2006 read at serial No.1 above appointing the two officers to the IAS with effect from 25.2.1984 against the vacancies for 1983. Further in the letter dated 19.10.2006 read at serial No.2 above the Government of India have assigned 1979 as the year of allotment in the IAS to the said two officers. For the purpose of interse seniority they are placed below Sri Tapan Sanapati, IAS (1979 as year of allotment) and above Sri V.P. Baligar, IAS (1980 as year of allotment). In the mean while Sri M.G. Halappanavar has voluntarily retired from service on 31.8.2006.

Sri Ashok V. David & Sri M.G. Halappanavar in their represention read serial No.3 above have requested to consider their case for promotion t9o the Above Super Time Scale (Rs. 22000-400-24500) inview of revision of their seniority. The IAS officers of 1979 batch including Sri Tapan Sanapati (who are senior to Sri Ashok V. David & Halappanavar) have been promoted to the above Super Time Scale from 25.11.2004. Subsequently their immediate junior Si V.P. Baligar too has been promoted to the Above Super Time Scale w.e.f. 3.11.2005. Sri Ashok V. David is holding the ex-cadre post MDHGML from 11.8.2004 and still continued in the said post. Presently he is in the Super Time Scale of IAS i.e. Rs. 18400-22400. Sri M.G. Halappanavar held the ex-cadre post of Secretary to Government, Food Proceessing and Haveri Technology w.e.f. 14.11.2005 and retired on 31.8.2006 in the ex-cadre post. Therefore as per rule 5(5) (b) of IAS Py Rules the promotions of these officers in the bove Super Time Scale are to be regulated with reference to promotion of their immediate juniors.

Considering that the officer of 1980 batch have also been promoted to the Above Super Time Scale from 3.11.2005 the Departmental Promotion Committee is its meting held on 27.12.2006 has recommended Sri Ashok V. David Sri M.G. Halappanavar as fil for promotion to the Above Super Time Scale of IAS.

In the circumstances explained above it has been decided to grant promotion to the above two officers to the Above Super Tme Scale of IAS w.e.f. 3.11.2005 with reference to promotion of immdiate juniors of 1980 batch.

**Government Order No. DPAR 571 SAS 2006, Bangalore, Dated: 9th February 2007**

Sri Ashok V.David, IAS (KN - 79) & Sri M.G. Halappanavar, IAS (KN - 79) are promoted to officiate in the grade of Above Super Time Scale of IAS carrying the pay scale of RS. 22400-525-24500 w.e.f. 03.11.2005 with reference to promotion of their immediate Junior IAS officers of 1980 batch to the said grade. On promotion they are deemed to have been continued in the respective posts held by them as on the date of promotion to Above Supertime Scale i.e., 3.11.2005.

By Order and in the name of the Governor of Karnataka,

**M. VASUDEVAMURTHY**

P.R. 289

Under Secretary to Government,

Department of Personnel and Administrative Reforms (Services-1)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ ಡಿಪಿಎಆರ್ 42 ಎಸ್‌ಎಎಸ್ 2007, ದಿನಾಂಕ 25.01.2007.

**ಪ್ರಸ್ತಾವನೆ:**

ಮೇಲೆ ದಿನಾಂಕ: 25.01.2007ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ಸುಧೀರ್ ಕೃಷ್ಣ, ಐಎಎಸ್ ಅವರನ್ನು ಲೋಕೋಪಯೋಗಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿಯಾಗಿ ನಿಮ್ನೀಕರಿಸಿದ ಹುದ್ದೆಗೆ ನೇಮಿಸಲಾಗಿದೆ. ಆದ್ದರಿಂದ ಲೋಕೋಪಯೋಗಿ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ನಿಮ್ನೀಕರಿಸುವ ಅವಶ್ಯಕತೆಯಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 2007, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿನ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಸುಧೀರ್ ಕೃಷ್ಣ, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಿ ಮುಂದುವರಿಸಿದೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರನ್ವಯ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 290

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**INFORMATION TECHNOLOGY, BIOTECHNOLOGY AND SCIENCE & TECHNOLOGY SECRETARIAT**

**ADDENDUM**

**No. ITD 01 PRM 2007, Bangalore, Dated: 23rd January 2007**

In the Order portion of the Government Order No. ITD 02 PRM 2005 dated 25th November, 2006 constituting a vision Group on Information Technology, "Secretary to Government, (e-Governance) DP & AR Department" is added to the Members List at Sl.No. 4 and Director, Information Technology & Biotechnology, Govt. of Karnataka at Sl. No. 15 respetively and may be read accordingly henceforth.

By Order and in the name of the Governor of Karnataka,

**T.B. RENUKAPRASAD**

P.R. 292

Under Secretary to Government,

Information Technology, Biotechnology and

Science & Technology Department.

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** ತೋಟಗಾರಿಕೆ ಇಲಾಖೆಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಅಧಿಕಾರಿ / ಸಿಬ್ಬಂದಿಯನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ:**
1) ಆದೇಶ ಸಂಖ್ಯೆ:ಕೃತೋಇ 127 ತೋಸೇಪ 2003, ದಿನಾಂಕ: 2.9.2005.
2) ಮಾನ್ಯ ಮುಖ್ಯಮಂತ್ರಿಗಳವರ ಅಧ್ಯಕ್ಷತೆಯಲ್ಲಿ ದಿ:1.6.2006 ರಂದು ನಡೆದ ಸಭೆಯ ನಡವಳಿ.
3) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ತೋಇ/ಆ/ಸಿ/ವಿನಿ-1/20/2006-07 ದಿ:6.6.2006.

**ಪ್ರಸ್ತಾವನೆ :**

1. ಕರ್ನಾಟಕ ರಾಜ್ಯವು ತೋಟಗಾರಿಕೆಗೆ ಹೆಸರುವಾಸಿಯಾಗಿದೆ. ತೋಟಗಾರಿಕೆಯಿಂದ ದೊರೆಯುವ ಹೆಚ್ಚಿನ ಇಳುವರಿ, ಆದಾಯ, ಗ್ರಾಮೀಣ ಉದ್ಯೋಗಸೃಷ್ಟಿ, ಪರಿಸರ ಸಮತೋಲನ, ಆಹಾರಭದ್ರತೆ, ಇತ್ಯಾದಿ ಅಂಶಗಳನ್ನು ಗಮನಿಸಿ ತೋಟಗಾರಿಕೆ ವಿಷಯವನ್ನು ರಾಜ್ಯಸರ್ಕಾರವು ಪ್ರಮುಖ ಗ್ರಾಮೀಣಾಭಿವೃದ್ಧಿ ವಲಯವನ್ನಾಗಿ ಪರಿಗಣಿಸಿರುತ್ತದೆ. ಕೇಂದ್ರ ಮತ್ತು ರಾಜ್ಯಸರ್ಕಾರಗಳು ಹೊಸ ಯೋಜನೆಗಳನ್ನು ಜಾರಿಗೊಳಿಸುವುದರ ಜೊತೆಗೆ ಹೆಚ್ಚಿನ ಅನುದಾನವನ್ನೂ ಸಹ ಒದಗಿಸಿರುತ್ತವೆ. ಪ್ರಸಕ್ತ ಸಾಲಿನಲ್ಲಿ ರೂ.300.00 ಕೋಟಿಗಳ ಯೋಜನಾ ಕಾರ್ಯಕ್ರಮಗಳಿಗಾಗಿ ಒದಗಿಸಲಾಗಿದ್ದು ಹಿಂದಿನ ಸಾಲಿನಲ್ಲಿ ಕೇವಲ ರೂ.52.00 ಕೋಟಿಗಳಾಗಿದ್ದುದು ತೋಟಗಾರಿಕೆಯ ಪ್ರಾಮುಖ್ಯತೆಯನ್ನು ಮನಗಾಣಿಸುತ್ತದೆ. ಭಾರತ ಸರ್ಕಾರದಿಂದ ಮತ್ತು ಇತರೆ ಸಂಸ್ಥೆಗಳ ಮೂಲಕ ರಾಷ್ಟ್ರೀಯ ತೋಟಗಾರಿಕೆ ಮಿಷನ್, ಮೈಕ್ರೋ ಇರಿಗೇಷನ್, ಸಂಸ್ಕರಣೆ, ರಫ್ತು, ತೋಟಗಾರಿಕೆ ಕ್ಷೇತ್ರ ಮತ್ತು ನರ್ಸರಿಗಳ ಅಭಿವೃದ್ಧಿ ಇತ್ಯಾದಿ ಪ್ರಮುಖ ಹೊಸ ಯೋಜನೆಗಳಿಗಾಗಿ ಸಾಕಷ್ಟು ಅನುದಾನವು ದೊರೆಯುತ್ತಲಿದೆ.

2. ತೋಟಗಾರಿಕೆಯ ತೀವ್ರ ಬೆಳವಣಿಗೆಗೆ ಸಮವಾಗಿ ತೋಟಗಾರಿಕೆ ಇಲಾಖೆಯ ಮೂಲಸೌಕರ್ಯಗಳಾಗಲೀ ಅಥವಾ ಮಾನವ ಸಂಪನ್ಮೂಲವಾಗಲೀ ವೃದ್ಧಿಯಾಗುತ್ತಿಲ್ಲ. ಸಾಕಷ್ಟು ಮಾನವ ಸಂಪನ್ಮೂಲ ಇಲ್ಲದಿರುವುದರಿಂದ ರೈತರ ಏಳಿಗೆಯನ್ನು ಸಾಧಿಸಬೇಕೆನ್ನುವ ಸರ್ಕಾರದ ಘನ ಉದ್ದೇಶ ಸಾಧ್ಯವಾಗುತ್ತಿಲ್ಲ. ತೋಟಗಾರಿಕೆ ಇಲಾಖೆಯಲ್ಲಿ ಶೇಕಡ 70 ರಷ್ಟು ಹುದ್ದೆಗಳು ಖಾಲಿಯಿರುತ್ತವೆ. ಅದರಲ್ಲೂ ಕ್ಷೇತ್ರಮಟ್ಟದಲ್ಲಿ ರೈತರಿಗೆ ಆಧುನಿಕ ತಂತ್ರಜ್ಞಾನದ ಬಗ್ಗೆ ತಿಳುವಳಿಕೆ ನೀಡುವ ವಿಸ್ತರಣಾ ಅಧಿಕಾರಿಗಳ ಮತ್ತು ತಾಂತ್ರಿಕ ಅಧಿಕಾರಿಗಳ ಹುದ್ದೆಗಳು ಖಾಲಿಯಿರುತ್ತವೆ. ಇದರಿಂದ ಇಲಾಖೆಯ ವಿವಿಧ ಯೋಜನೆಗಳ ಅನುಷ್ಠಾನವು ತೀವ್ರವಾಗಿ ಕುಂಠಿತಗೊಂಡಿದೆ ಮತ್ತು ಹೆಚ್ಚುತ್ತಿರುವ ರೈತರ ತಾಂತ್ರಿಕ ಅಗತ್ಯಗಳನ್ನು ಪೂರೈಸಲು ಸಾಧ್ಯವಾಗದ ಸ್ಥಿತಿಯುಂಟಾಗಿರುತ್ತಿದೆ. ಇಲಾಖೆಯ ಹುದ್ದೆಗಳನ್ನು ಸುಮಾರು ಎರಡು ದಶಕಗಳಿಂದ ಭರ್ತಿ ಮಾಡದಿರುವುದರಿಂದ ತೋಟಗಾರಿಕೆ ಇಲಾಖೆಯ ಚಟುಟಿಕೆಗಳು ಪಾರ್ಶ್ವವಾಯು ಪಿಡಿತವಾಗಿವೆ. ಖಾಲಿ ಹುದ್ದೆಗಳ ಸಂಖ್ಯೆಯು ವಯೋನಿವೃತ್ತಿ, ಮರಣ ಮತ್ತು ಇತರೆ ಕಾರಣಗಳಿಂದಾಗಿ ನಿರಂತರವಾಗಿ ಹೆಚ್ಚಾಗುತ್ತಲಿದೆ.

3. ಆದುದರಿಂದ, ಇಲಾಖೆಯ ಮೇಲಿನ ತೊಂದರೆಗಳನ್ನು ವಿವರಿಸುವ ಉದ್ದೇಶದಿಂದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿನ ರಾಜ್ಯಮಟ್ಟದ ಉನ್ನತಾಧಿಕಾರಯುತ ಸಮಿತಿಯನ್ನು ಸಂಪರ್ಕಿಸಲಾಯಿತು. ಅಗತ್ಯವಿರುವ ಎಲ್ಲಾ ವಿವರಗಳನ್ನು ಮತ್ತು ಸತ್ಯಾಂಶಗಳನ್ನು ಅಪರ ಮುಖ್ಯ ಕಾರ್ಯದರ್ಶಿಗಳ ಮುಂದೆ ಸಲ್ಲಿಸಲಾಯಿತು. ಇಲಾಖೆಯ ದುಸ್ಥಿತಿಯನ್ನು ಮನಗಂಡ ಉನ್ನತಾಧಿಕಾರಯುತ ಸಮಿತಿಯು ಸಕಾರಾತ್ಮಕವಾಗಿ

ಸ್ಪಂದಿಸಿರುತ್ತದೆ. ಮತ್ತು 56 ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, 16 ಸಹಾಯಕ ತೋಟಗಾರಿಕೆ ನಿರ್ದೇಶಕರು, 49 ಸಹಾಯಕ ತೋಟಗಾರಿಕೆ ಅಧಿಕಾರಿಗಳು ಹಾಗೂ 193 ತೋಟಗಾರಿಕೆ ಸಹಾಯಕರನ್ನು ನೇಮಿಸಿಕೊಳ್ಳಲು ಅನುಮತಿಸಿರುತ್ತದೆ. ತೋಟಗಾರರ ಹುದ್ದೆಗಳನ್ನು ಕಡಿತಗೊಳಿಸುವ ಪ್ರಕ್ರಿಯೆಯಿಂದ ಮುಕ್ತಗೊಳಿಸಿರುತ್ತದೆ. ಉನ್ನತಾಧಿಕಾರ ಸಮಿತಿಯ ತೀರ್ಮಾನದನ್ವಯ 17 ಚಾಲಕರು ಮತ್ತು 26 ಸೇವಕರ ಹುದ್ದೆಗಳನ್ನು ಮೇಲೆ ಓದಲಾದ (1)ರ ಆದೇಶದನ್ವಯ ರದ್ದುಗೊಳಿಸಲಾಗಿದೆ.

4. ತೋಟಗಾರಿಕೆ ಇಲಾಖೆಯು 56 ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, 16 ಸಹಾಯಕ ತೋಟಗಾರಿಕೆ ನಿರ್ದೇಕರು, 49 ಸಹಾಯಕ ತೋಟಗಾರಿಕೆ ಅಧಿಕಾರಿಗಳು ಹಾಗೂ 193 ತೋಟಗಾರಿಕೆ ಸಹಾಯಕರನ್ನು ನೇಮಿಸಲು ಎರಡು ಸಂದರ್ಭಗಳಲ್ಲಿ ಎಂದರೆ ದಿ:9.8.2004 ಹಾಗೂ 6.9.2004 ರಂದು ಕರ್ನಾಟಕ ಲೋಕಸೇವಾ ಆಯೋಗವನ್ನು ಸಂಪರ್ಕಿಸಿರುತ್ತದೆ. ಕರ್ನಾಟಕ ಲೋಕಸೇವಾ ಆಯೋಗವು ತಾಂತ್ರಿಕ ತೊಂದರೆಗಳಿಂದಾಗಿ ಈ ಹುದ್ದೆಗಳನ್ನು ಭರ್ತಿ ಮಾಡಿರುವುದಿಲ್ಲ.

5. ಅಶಕ್ತ ತೋಟಗಾರಿಕೆ ಇಲಾಖೆಗೆ ನೆರವು ಒದಗಿಸುವ ಮತ್ತು ಪುನರುಜ್ಜೀವನಗೊಳಿಸುವ ದೃಷ್ಟಿಯಿಂದ ಹಾಗೂ ಕರ್ನಾಟಕ ರಾಜ್ಯದ ಜನತೆಯ ಹಿತದೃಷ್ಟಿಯಿಂದ ತೋಟಗಾರಿಕೆ ವಲಯದ ಅಗಾದ ಸಾಮರ್ಥ್ಯದ ಲಾಭವನ್ನು ಪಡೆಯಲು ಸನ್ಮಾನ್ಯ ಮುಖ್ಯಮಂತ್ರಿಗಳು ದಿ:1.6.2006 ರಂದು ಸಭೆ ನಡೆಸಿರುತ್ತಾರೆ. ಈ ಸಭೆಯಲ್ಲಿ ಸನ್ಮಾನ್ಯ ತೋಟಗಾರಿಕೆ ಸಚಿವರು, ಸನ್ಮಾನ್ಯ ಲೋಕೋಪಯೋಗಿ ಇಲಾಖಾ ಸಚಿವರು, ಕರ್ನಾಟಕ ಲೋಕಸೇವಾ ಆಯೋಗದ ಅಧ್ಯಕ್ಷರು, ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ಸನ್ಮಾನ್ಯ ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದಶಿಗಳು, ತೋಟಗಾರಿಕೆ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಕಾರಿಗಳು, ಇತರರು ಭಾಗವಹಿಸಿದ್ದರು. ಈ ಸಭೆಯಲ್ಲಿ ತೋಟಗಾರಿಕೆ ಇಲಾಖೆಯ ಸಮಸ್ಯೆಗಳನ್ನು ಕೂಲಂಕುಷವಾಗಿ ಚರ್ಚಿಸಲಾಯಿತು. ಹೆಚ್ಚಿನ ಸಂಖ್ಯೆಯಲ್ಲಿ ಹುದ್ದೆಗಳು ಖಾಲಿ ಇರುವುದರಿಂದ ಇಲಾಖೆಯು ಕೋಮ ಸ್ಥಿತಿಯನ್ನು ತಲುಪುವ ಮುನ್ನ ಮತ್ತಷ್ಟು ಹದಗೆಡುವುದನ್ನು ತಪ್ಪಿಸಲು ತಕ್ಷಣದ ಕ್ರಮಗಳನ್ನು ಕೈಗೊಳ್ಳಲು ಒಪ್ಪಲಾಯಿತು. ಶಾಶ್ವತ ಪರಿಹಾರ ಕೈಗೊಳ್ಳುವುದು ಕರ್ನಾಟಕ ಲೋಕಸೇವಾ ಆಯೋಗದ ಕೈಯಲ್ಲಿದ್ದು ಇಲಾಖೆಗೆ ತಕ್ಷಣ ಪರಿಹಾರೋಪಾಯಗಳನ್ನು ಕಲ್ಪಿಸುವ ಬಗ್ಗೆ ಸನ್ಮಾನ್ಯ ಮುಖ್ಯಮಂತ್ರಿಗಳು ಮತ್ತು ಸನ್ಮಾನ್ಯ ತೋಟಗಾರಿಕೆ ಸಚಿವರು ಪರಿಶೀಲಿಸಿದುದರಿಂದ ತೋಟಗಾರಿಕೆ ಸಹಾಯಕರ ಹುದ್ದೆಗಳಿಗೆ ಗುತ್ತಿಗೆ ಅಥವಾ ಬಾಹ್ಯ ಮೂಲಗಳಿಂದ ಭರ್ತಿಮಾಡಲು ನಿರ್ಧರಿಸಲಾಯಿತು. ಈ ಕೆಳಕಾಣಿಸಿದ ನಿರ್ಧಾರಗಳನ್ನು ಕೈಗೊಳ್ಳಲಾಯಿತು.

ಅ) ಉದ್ದೇಶಕ್ಕಾಗಿ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಗಳನ್ನು ರಚಿಸುವುದು. ಪ್ರಸ್ತಾಪಿತ ಸಮಿತಿಗಳು ಕೆಳಕಂಡಂತಿರುತ್ತವೆ.

1. ಜಿಲ್ಲಾಧಿಕಾರಿಗಳು - ಅಧ್ಯಕ್ಷರು
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು (ಜಿಲ್ಲಾ ಪಂಚಾಯತ್) - ಸದಸ್ಯರು
3. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ - ಸದಸ್ಯರು
4. ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿ - ಸದಸ್ಯರು
5. ತೋಟಗಾರಿಕೆ ಉಪ ನಿರ್ದೇಶಕರು - ಸದಸ್ಯ ಕಾರ್ಯದರ್ಶಿ

ಈ ಸಮಿತಿಗಳು ಮೇಲೆ ಹೇಳಿದ ಹುದ್ದೆಗಳನ್ನು 1:5ರ ಅನುಪಾತದಲ್ಲಿ ಮೆರಿಟ್ ಹಾಗೂ ಸಂದರ್ಶನದ ಮೂಲಕ ಆಯ್ಕೆ ಮಾಡುವುದು. ಜಾರಿಯಲ್ಲಿರುವ ನಿಯಮಗಳನ್ನು ಮತ್ತು ಮೀಸಲಾತಿ ನೀತಿಯನ್ನು ಅಳವಡಿಸಿಕೊಂಡು ಹಾಗೂ ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳನುಸಾರ ಅರ್ಹ ಅಭ್ಯರ್ಥಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳುವುದು.

ಆ) ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾಪಿಸಿರುವ 193 ತೋಗಾರಿಕೆ ಸಹಾಯಕರ ಹುದ್ದೆಗಳನ್ನು ಹೊರತುಪಡಿಸಿ ಖಾಲಿಯಿರುವ 242 ಬಾಕಿ ತೋಟಗಾರಿಕೆ ಸಹಾಯಕರ ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸೂಕ್ತವಾಗಿ ಸಡಿಲಿಸಿ ತೋಟಗಾರಿಕೆ ನಿರ್ದೇಶಕರು ಭರ್ತಿ ಮಾಡುವುದು. ಅಲ್ಲಿಯವರೆಗೆ ಈ ಹುದ್ದೆಗಳನ್ನು ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಜಿಲ್ಲಾ ಮಟ್ಟದ ಸಮಿತಿಗಳ ಮೂಲಕ ಬರ್ತಿ ಮಾಡುವುದು. ತೋಟಗಾರಿಕೆ ಸಹಾಯಕರ ಹುದ್ದೆಗಳನ್ನು ನೇರನೇಮಕಾತಿಯಿಂದ ತುಂಬಲು ವೃಂದ ಮತ್ತು ನೇಮಕಾತಿ ನಿಯಮಗಳಡಿ ಕೆಳಕಾಣಿಸಿದಂತೆ ಅವಕಾಶವಿರುತ್ತದೆ.

1. ಪದವಿಪೂರ್ವ ಪರೀಕ್ಷೆ ಅಥವಾ ತತ್ಸಮಾನ ಅರ್ಹತೆಯನ್ನು ಹೊಂದಿರುವುದು.

2. ತೋಟಗಾರಿಕೆ ಇಲಾಖೆಯಿಂದ ನೀಡುವ ತರಬೇತಿಯನ್ನು ಯಶಸ್ವಿಯಾಗಿ ಪೂರೈಸಿರುವುದು ಅಥವಾ ವೃತ್ತಿ ಅಭಿಶಿಕ್ಷಣ ಕೋರ್ಸ್ (ಜೆ.ಓ.ಸಿ.) ಪೂರೈಸಿರುವುದು ಅಥವಾ ತೋಟಗಾರಿಕೆ ವಿಷಯದಲ್ಲಿ ತರಬೇತಿ ಪಡೆದ ಬಗ್ಗೆ ಸರ್ಕಾರದಿಂದ ನೀಡಿರುವ ಪ್ರಮಾಣ ಪತ್ರ.

ಇ) 440 ತೋಟಗಾರರ ಹುದ್ದೆಗಳಿಗೆ ಮಾಸಿಕ ಸಂಚಿತ ವೇತನದ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲು ತೋಟಗಾರಿಕೆ ಉಪನಿರ್ದೇಶಕರ ಅಧ್ಯಕ್ಷತೆಯಲ್ಲಿ ಸಮಿತಿಗಳನ್ನು ರಚಿಸುವುದು.

ಈ) ರೈತಸಂಪರ್ಕ ಕೇಂದ್ರಗಳಿಗೆ 796 ಸಹಾಯಕ ತೋಟಗಾರಿಕೆ ಅಧಿಕಾರಿಗಳ ಹುದ್ದೆಗಳನ್ನು ಸೃಜಿಸಿ ಕರ್ನಾಟಕ ಲೋಕಸೇವಾ ಆಯೋಗವು ನೇಮಕ ಮಾಡುವವರೆಗೆ ಅವರುಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳುವುದು.

ಉ) ರೈತರಿಗೆ ತಾಂತ್ರಿಕ ಸಲಹೆಗಳನ್ನು ನೀಡಲು 500 ಸ್ಟೈಪಂಡರಿ ಹುದ್ದೆಗಳನ್ನು ಸೃಜಿಸಿ ತೋಟಗಾರಿಕೆ ತರಬೇತಿನ್ನು ಪಡೆದ ಅಭ್ಯರ್ಥಿಗಳನ್ನು ಸ್ಟೈಪಂಡರಿ ಆಧಾರದ ಮೇಲೆ 6 ತಿಂಗಳ ಅವಧಿಗೆ ನೇಮಿಸುವುದು ಹಾಗೂ ಅವಶ್ಯಕತೆ ಇರುವವರೆಗೆ ಪ್ರತಿವರ್ಷವು ಮುಂದುವರೆಸುವುದು.

6. ಸನ್ಮಾನ್ಯ ಮುಖ್ಯಮಂತ್ರಿಯವರ ಆದೇಶವನ್ನು ತುರ್ತಾಗಿ ಜಾರಿಗೊಳಿಸಬೇಕಾಗಿರುವುದರಿಂದ, ಈ ಕೆಳಕಾಣಿಸಿದ ಹುದ್ದೆಗಳನ್ನು ಸಂಚಿತವೇತನದ ಗುತ್ತಿಗೆ ಆಧಾರದ ಮೇಲೆ ಒಂದು ವರ್ಷ ಅವಧಿಗೆ ಅಥವಾ ಸಕ್ರಮ ನೇಮಕಾತಿ ಆಗುವವರೆಗೆ ಭರ್ತಿಮಾಡುವುದು. ಸಂಚಿತ ವೇತನದ ವಿವರಗಳನ್ನು ಈ ಕೆಳಗಿನಂತೆ ಇರುತ್ತದೆ.

| ಸ. ನಂ. | ವೃಂದ | ಗುತ್ತಿಗೆ ಮೇಲೆ ನೇಮಿಸಿ ಕೊಳ್ಳುವ ಅಭ್ಯರ್ಥಿಗಳ ಸಂಖ್ಯೆ | ಮಾಸಿಕ ಸಂಚಿತ ವೇತನ | ಅಂದಾಜು ವಾರ್ಷಿಕ ವೆಚ್ಚ (ಲಕ್ಷ ರೂ. ಗಳಲ್ಲಿ) |
|---|---|---|---|---|
| 1. | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು | 73 | 9,500 | 83.00 |
| 2. | ಸಹಾಯಕ ತೋಟಗಾರಿಕೆ ನಿರ್ದೇಶಕರು | 92 | 8,500 | 94.00 |
| 3. | ಸಹಾಯಕ ತೋಟಗಾರಿಕೆ ಅಧಿಕಾರಿಗಳು | 173 | 7,500 | 156.00 |

| ಸ. ನಂ. | ವೃಂದ | ಗುತ್ತಿಗೆ ಮೇಲೆ ನೇಮಿಸಿ ಕೊಳ್ಳುವ ಅಭ್ಯರ್ಥಿಗಳ ಸಂಖ್ಯೆ | ಮಾಸಿಕ ಸಂಚಿತ ವೇತನ | ಅಂದಾಜು ವಾರ್ಷಿಕ ವೆಚ್ಚ (ಲಕ್ಷ ರೂ. ಗಳಲ್ಲಿ) |
|---|---|---|---|---|
| 4. | ತೋಟಗಾರರು | 440 | 3,000 | 158.00 |
| 5. | ಸಹಾಯಕ ತೋಟಗಾರಿಕೆ ಅಧಿಕಾರಿ (ರೈತಮಿತ್ರಕೇಂದ್ರ) | 796 | 7,500 | 716.00 |
| 6. | ತೋಟಗಾರಿಕೆ ಸಹಾಯಕ | 242 | 4,500 | 131.00 |
| 7. | ತೋಟಗಾರಿಕೆ ತರಬೇತಿ ಹೊಂದಿದ ಅಭ್ಯರ್ಥಿಗಳನ್ನು ಸ್ಟೈಪಂಡರಿ ಆಧಾರದ ಮೇಲೆ ನೇಮಕಾತಿ | 500 | 2,000 | 60.00 |
| | **ಒಟ್ಟು** | | | **1,398.00** |

7. ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಉನ್ನತ ಅಧಿಕಾರಯುತ ಸಮಿತಿ ಸಭೆಯಲ್ಲಿ ತೀರ್ಮಾನಿಸಿದಂತೆ ದಿನಾಂಕ: 1.4.2000 ರಂದು ಖಾಲಿಯಿದ್ದ ಹುದ್ದೆಗಳ ಪೈಕಿ ಶೇಕಡ 80 ರಷ್ಟು ಖಾಲಿ ಹುದ್ದೆಗನ್ನು ರದ್ದುಗೊಳಿಸುವುದರಿಂದ ತೋಟಗಾರಿಕೆ ಇಲಾಖೆಗೆ ವಿನಾಯ್ತಿಯನ್ನು ನೀಡಲಾಗಿದೆ.

8. ತೋಟಗಾರಿಕೆ ಇಲಾಖೆಗಳನ್ನು ಪುನರುಜ್ಜೀವನಗೊಳಿಸುವ ಹಾಗೂ ಕರ್ನಾಟಕ ರಾಜ್ಯದ ರೈತರ ಹಿತದೃಷ್ಟಿಯಿಂದ ಯೋಜನೆಗಳನ್ನು ತೀವ್ರಗತಿಯಿಂದ ಅನುಷ್ಠಾನಗೊಳಿಸಬೇಕಾಗಿರುವುದರಿಂದ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಆರ್ಥಿಕ ಇಲಾಖೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗಳನ್ನು ಸಂಪರ್ಕಿಸಿ ತದನಂತರ ಸಚಿವ ಸಂಪುಟದ ಮುಂದೆ ಈ ವಿಷಯವನ್ನು ತರಲಾಯಿತು. ಈ ಹಿನ್ನೆಲೆಯಲ್ಲಿ ಕೆಳಕಾಣಿಸಿರುವಂತೆ ಆದೇಶವನ್ನು ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 139 ತೋಸೇಪ 2006, ಬೆಂಗಳೂರು, ದಿನಾಂಕ: 24ನೇ ಜನವರಿ 2007**

ತೋಟಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಕೆಳಕಾಣಿಸಿರುವ ಹುದ್ದೆಗಳನ್ನು ಭರ್ತಿ ಮಾಡಲು ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

1) ಕರ್ನಾಟಕ ಲೋಕಸೇವಾ ಆಯೋಗದಿಂದ ನೇಮಕಾತಿ ಮಾಡುವವರೆಗೆ ಅಥವಾ ಒಂದು ವರ್ಷದ ಅವಧಿಗೆ ಇವೆರಡರಲ್ಲಿ ಯಾವುದು ಮೊದಲು ಘಟಿಸುವುದೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ 73 ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, 92 ಸಹಾಯಕ ತೋಟಗಾರಿಕೆ ನಿರ್ದೇಕರು, 73 ಸಹಾಯಕ ತೋಟಗಾರಿಕೆ ಅಧಿಕಾರಿಗಳು ಹಾಗೂ 435 ತೋಟಗಾರಿಕೆ ಸಹಾಯಕರ ಹುದ್ದೆಗಳನ್ನು ಅಗತ್ಯವಿರುವ ಆಯವ್ಯಯದೊಂದಿಗೆ ಭರ್ತಿ ಮಾಡುವುದು. ಈ ಉದ್ದೇಶಕ್ಕಾಗಿ ಸಂಬಂಧಿತ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಗಳನ್ನು ರಚಿಸಲಾಗಿದೆ.

2) ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾಪಿಸಿರುವ 193 ತೋಟಗಾರಿಕೆ ಸಹಾಯಕರ ಹುದ್ದೆಗಳನ್ನು ಹೊರತುಪಡಿಸಿ ಖಾಲಿಯಿರುವ 242 ಬಾಕಿ ತೋಟಗಾರಿಕೆ ಸಹಾಯಕರ ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸೂಕ್ತವಾಗಿ ಸಡಿಲಿಸಿ ತೋಟಗಾರಿಕೆ ಇಲಾಖೆಯಿಂದ ಅಗತ್ಯವಿರುವ ಆಯವ್ಯಯದೊಂದಿಗೆ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡುವುದು. ಈ ಉದ್ದೇಕ್ಕಾಗಿ ತೋಟಗಾರಿಕೆ ನಿರ್ದೇಶಕರ ಅದ್ಯಕ್ಷತೆಯಲ್ಲಿ ಸಮಿತಿ ರಚಿಸಲಾಗಿದೆ.

3) ತೋಟಗಾರಿಕೆ ಉಪನಿರ್ದೇಶಕರ ಅಧ್ಯಕ್ಷತೆಯಲ್ಲಿ ಸಮಿತಿಗಳನ್ನು ರಚಿಸಿ 440 ತೋಟಗಾರರ ಹುದ್ದೆಗಳಿಗೆ ಸಂಪೂರ್ಣ ತಾತ್ಕಾಲಿಕವಾಗಿ ಮಾಸಿಕ ಸಂಚಿತ ವೇತನದ ಗುತ್ತಿಗೆ ಆಧಾರದ ಮೇಲೆ ಅಗತ್ಯವಿರುವ ಆಯವ್ಯಯದೊಂದಿಗೆ ನೇಮಕ ಮಾಡುವುದು.

4) ರೈತ ಸಂಪರ್ಕ ಕೇಂದ್ರಗಳಿಗೆ 796 ಸಹಾಯಕ ತೋಟಗಾರಿಕೆ ಅಧಿಕಾರಿಗಳ ಹುದ್ದೆಗಳನ್ನು ಸೃಜಿಸಲಾಗಿದೆ. ಅಗತ್ಯವಿರುವ ಆಯವ್ಯಯದೊಂದಿಗೆ ಕರ್ನಾಟಕ ಲೋಕಸೇವಾ ಆಯೋಗವು ನೇಮಕ ಮಾಡುವವರೆಗೆ ಅವರುಗಳನ್ನು ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳುವುದು.

5) ರೈತರಿಗೆ ತಾಂತ್ರಿಕ ಸಲಹೆಗಳನ್ನು ನೀಡಲು 500 ಸ್ಟೈಪಂಡರಿ ಹುದ್ದೆಗಳನ್ನು ಸೃಜಿಸಲಾಗಿದೆ. ಅಗತ್ಯವಿರುವ ಆಯವ್ಯಯದೊಂದಿಗೆ ತೋಟಗಾರಿಕೆ ತರಬೇತಿಯನ್ನು ಪಡೆದ ಅಭ್ಯರ್ಥಿಗಳನ್ನು ಸ್ಟೈಪಂಡರಿ ಆಧಾರದ ಮೇಲೆ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ 6 ತಿಂಗಳ ಅವಧಿಗೆ ನೇಮಿಸುವುದು ಹಾಗೂ ಅವಶ್ಯಕತೆ ಇರುವವರೆಗೆ ಪ್ರತಿವರ್ಷವು ಮುಂದುವರೆಸುವುದು.

6) ಮೇಲಿನ ಅಂಶ (1) ಮತ್ತು (4)ರ ಉದ್ದೇಶಕ್ಕಾಗಿ ಜಿಲ್ಲಾಧಿಕಾರಿಗಳ ಅದ್ಯಕ್ಷತೆಯಲ್ಲಿ ಕೆಳಕಂಡಂತೆ ಸಮಿತಿಗಳನ್ನು ರಚಿಸಲಾಗಿದೆ.

ಅ) ಸಮಿತಿ :

1. ಜಿಲ್ಲಾಧಿಕಾರಿಗಳು - ಅಧ್ಯಕ್ಷರು
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು (ಜಿಲ್ಲಾ ಪಂಚಾಯತ್) - ಸದಸ್ಯರು
3. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ - ಸದಸ್ಯರು
4. ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿ - ಸದಸ್ಯರು
5. ತೋಟಗಾರಿಕೆ ಉಪ ನಿರ್ದೇಶಕರು - ಸದಸ್ಯ ಕಾರ್ಯದರ್ಶಿ

ಆ) ಸಂಪೂರ್ಣ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ 6 ತಿಂಗಳ ಅವಧಿಗೆ ಮಾತ್ರ ನೇಮಕ ಮಾಡಲು ಹುದ್ದೆನಾಮ ಸಂಚಿತ ವೇತನದ ವಿವರಗಳು ಕೆಳಗಿನಂತಿರುತ್ತವೆ.

| ಕ್ರ. ಸಂ. | ವೃಂದ | ವಿವರಗಳು |
|---|---|---|
| 1. | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು | ಕರ್ನಾಟಕ ಲೋಕಸೇವಾ ಆಯೋಗಕ್ಕೆ ಹಿಸತೋನಿ-73, ಸತೋನಿ-62, ಸತೋಅ-115 ಹುದ್ದೆಗಳ ಬಗ್ಗೆ ಕೋರಿಕೆ ಕಳುಹಿಸಲಾಗಿತ್ತು. ಈ ಎಲ್ಲಾ ನೇರನೇಮಕಾತಿ ಹುದ್ದೆಗಳಿಗೆ ಕೆ.ಪಿ.ಎಸ್.ಸಿ. ಯಿಂದ ಸರ್ಕಾರಕ್ಕೆ ಅಭ್ಯರ್ಥಿಗಳ ಪಟ್ಟಿ ಸಲ್ಲಿಕೆಯಾಗಿದೆ (ಕೆಪಿಎಸ್‌ಸಿ ಪತ್ರ ಸಂಖ್ಯೆ R(1)1432/06-07/PSC ದಿ:5.12.2006, ಸಂಖ್ಯೆ:PSC 04 RTB 06 ದಿ:22.12.2006 ಮತ್ತು ಸಂಖ್ಯೆ: PSC 05 RTB 06 ದಿ:11.1.2007). ಉಳಿದಂತೆ 30 ಸತೋನಿ ಹಾಗೂ 58 ಸತೋಅ ಹುದ್ದೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗಕ್ಕೆ ಕೋರಿಕೆ ಸಲ್ಲಿಸಲಾಗುತ್ತಿದೆ. ಆದುದರಿಂದ ಈ ಹುದ್ದೆಗಳಿಗೆ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡುವುದನ್ನು ಕೈಬಿಡಲಾಗಿದೆ. |
| 2. | ಸಹಾಯಕ ತೋಟಗಾರಿಕೆ ನಿರ್ದೇಶಕರು | |
| 3. | ಸಹಾಯಕ ತೋಟಗಾರಿಕೆ ಅಧಿಕಾರಿಗಳು | |

| ಕ್ರ. ಸಂ. | ವೃಂದ | ವಿವರಗಳು | ಕ್ರ. ಸಂ. |
|---|---|---|---|
| 4. | ತೋಟಗಾರಿಕೆ ಸಹಾಯಕ | ಗುತ್ತಿಗೆ ಮೇಲೆ ನೇಮಿಸಿಕೊಳ್ಳುವ ಅಭ್ಯರ್ಥಿಗಳ ಸಂಖ್ಯೆ 435 | ಮಾಸಿಕ ಸಂಚಿತ ವೇತನ 4,500 |
| | ಈ ಹುದ್ದೆಗಳಿಗೆ ಸಂಬಂಧಿಸಿದಂತೆ ತೋಟಗಾರಿಕೆ ನಿರ್ದೇಶಕರು ಕರ್ನಾಟಕ ಲೋಕಸೇವಾ ಆಯೋಗಕ್ಕೆ ನೇಮಕಾತಿ ಕೋರಿಕೆ ಸಲ್ಲಿಸಿದ್ದು ಉಚ್ಚ ನ್ಯಾಯಾಲಯದ ತಡೆಯಿಂದಾಗಿ ನೇಮಕಾತಿ ಪ್ರಕ್ರಿಯೆ ಪೂರ್ಣವಾಗಿಲ್ಲ. ಉಚ್ಚ ನ್ಯಾಯಾಲಯದಿಂದ ಪ್ರಕರಣ ಇತ್ಯರ್ಥವಾಗಿ ನೇಮಕಾತಿಯಾಗುವವರೆಗೆ ಅಥವಾ 6 ತಿಂಗಳವರೆಗೆ ಇವೆರಡರಲ್ಲಿ ಯಾವುದು ಮೊದಲು ಘಟಿಸುವುದೋ ಅಂದಿನವರೆಗೆ, ಸಂಪೂರ್ಣ ತಾತ್ಕಾಲಿಕ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡುವುದು. | | |
| 5 | ಸಹಾಯಕ ತೋಟಗಾರಿಕೆ ಅಧಿಕಾರಿಗಳು (ರೈತಮಿತ್ರ ಕೇಂದ್ರಗಳಿಗೆ) | ಗುತ್ತಿಗೆ ಮೇಲೆ ನೇಮಿಸಿಕೊಳ್ಳುವ ಅಭ್ಯರ್ಥಿಗಳ ಸಂಖ್ಯೆ 796 | ಮಾಸಿಕ ಸಂಚಿತ ವೇತನ 7,500 |

7) ಮೇಲಿನ ಅಂಶ (2)ರ ಉದ್ದೇಶಕ್ಕಾಗಿ ತೋಟಗಾರಿಕೆ ನಿರ್ದೇಶಕರ ಅಧ್ಯಕ್ಷತೆಯಲ್ಲಿ ಕೆಳಕಂಡಂತೆ ಸಮಿತಿಯನ್ನು ರಚಿಸಲಾಗಿದೆ.

1. ತೋಟಗಾರಿಕೆ ನಿರ್ದೇಶಕರು - ಅಧ್ಯಕ್ಷರು
2. ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಅಥವಾ ಅವರ ಪ್ರತಿನಿಧಿಯಾಗಿ ಜಂಟಿ ನಿರ್ದೇಶಕರ ಹುದ್ದೆಗೆ ಕಡಿಮೆಯಿಲ್ಲದ ಅಧಿಕಾರಿ - ಸದಸ್ಯರು
3. ನಿರ್ದೇಶಕರು ಅಥವಾ ಅವರ ಪ್ರತಿನಿಧಿ, ಉದ್ಯೋಗ ವಿನಿಮಯ ಇಲಾಖೆ - ಸದಸ್ಯರು
4. ನಿರ್ದೇಶಕರು, ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ನಿರ್ದೇಶನಾಲಯ - ಸದಸ್ಯರು
5. ತೋಟಗಾರಿಕೆ ಜಂಟಿ ನಿರ್ದೇಶಕರು (ಆಡಳಿತ) - ಸದಸ್ಯ-ಕಾರ್ಯದರ್ಶಿ

8) ಮೇಲಿನ ಅಂಶ (3) ಮತ್ತು (5) ರ ಉದ್ದೇಶಕ್ಕಾಗಿ ತೋಟಗಾರಿಕೆ ಉಪನಿರ್ದೇಶಕರು (ಜಿಲ್ಲಾಪಂಚಾಯತ್) ಅಧ್ಯಕ್ಷತೆಯಲ್ಲಿ ಕೆಳಕಂಡಂತೆ ಸಮಿತಿಗಳನ್ನು ರಚಿಸಲಾಗಿದೆ.

ಅ) ಸಮಿತಿ:

1. ತೋಟಗಾರಿಕೆ ಉಪನಿರ್ದೇಶಕರು (ಜಿಪಂ) - ಅಧ್ಯಕ್ಷರು
2. ಜಿಲ್ಲಾ ಉದ್ಯೋಗ ವಿನಿಮಯ ಅಧಿಕಾರಿ - ಸದಸ್ಯರು
3. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ - ಸದಸ್ಯರು
4. ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿ - ಸದಸ್ಯರು
5. ಆಯಾ ಜಿಲ್ಲೆಯ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ/ಜಿಲ್ಲೆಯ, ತಾಲ್ಲೂಕಿನ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (7 ಹೊಸ ಜಿಲ್ಲೆಗೆ ಸಂಬಂಧಿಸಿದಂತೆ) - ಸದಸ್ಯ-ಕಾರ್ಯದರ್ಶಿ

ಆ) ಸಂಪೂರ್ಣ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ 6 ತಿಂಗಳ ಅವಧಿಗೆ ಮಾತ್ರ ನೇಮಕ ಮಾಡಲು ಹುದ್ದೆವಾರು ಸಂಚಿತ ವೇತನದ ವಿವರಗಳು ಕೆಳಗಿನಂತಿರುತ್ತವೆ.

| ಕ್ರ. ಸಂ. | ವೃಂದ | ಗುತ್ತಿಗೆ ಮೇಲೆ ನೇಮಿಸಿಕೊಳ್ಳುವ ಅಭ್ಯರ್ಥಿಗಳ ಸಂಖ್ಯೆ | ಮಾಸಿಕ ಸಂಚಿತ ವೇತನ |
|---|---|---|---|
| 1. | ತೋಟಗಾರರು | 440 | 3,000 |
| 2. | ತೋಟಗಾರಿಕೆ ತರಬೇತಿ ಹೊಂದಿದ ಅಭ್ಯರ್ಥಿಗಳನ್ನು ಸ್ಟೈಪಂಡರಿ ಆಧಾರದ ಮೇಲೆ ನೇಮಕಾತಿ | 500 | 2,000 |

9) ಈ ಸಮಿತಿಗಳು ಮೇಲೆ ಹೇಳಿದ ಹುದ್ದೆಗಳನ್ನು 1:5ರ ಅನುಪಾತದಲ್ಲಿ ಮೆರಿಟ್ ಹಾಗೂ ಸಂದರ್ಶನದ ಮೂಲಕ ಆಯ್ಕೆ ಮಾಡುತಕ್ಕದ್ದು.

10) ಜಾರಿಯಲ್ಲಿರುವ ನಿಯಮಗಳನ್ನು ಮತ್ತು ಮೀಸಲಾತಿ ನೀತಿಯನ್ನು ಅಳವಡಿಸಿಕೊಂಡು ಹಾಗೂ ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳನುಸಾರ ಅರ್ಹ ಅಭ್ಯರ್ಥಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳತಕ್ಕದ್ದು.

11) ಗುತ್ತಿಗೆ ಆಧಾರದ ನೇಮಕವು ಕರ್ನಾಟಕ ಲೋಕಸೇವಾ ಆಯೋಗದಿಂದ ಅಥವಾ ಸಂಬಂಧಪಟ್ಟ ನೇಮಕಾತಿ ಪ್ರಾಧಿಕಾರಗಳಿಂದ ಖಾಯಂ ಆಗಿ ಆಯ್ಕೆಯಾದ ಅಭ್ಯರ್ಥಿಗಳ ನೇಮಕಾತಿ ಆದಕೂಡಲೇ ರದ್ದುಗೊಳ್ಳತಕ್ಕದ್ದು.

12) ಜಿಲ್ಲಾವಾರು ಹುದ್ದೆಗಳ ವಿವರಗಳನ್ನು ಮತ್ತು ಅಗತ್ಯವಿರುವ ಇತರೆ ಮಾರ್ಗಸೂಚಿಗಳನ್ನು ಹಾಗೂ ಸಂಪೂರ್ಣ ತಾತ್ಕಾಲಿಕ ಗುತ್ತಿಗೆ ಆಧಾರದ 6 ತಿಂಗಳ ಅವಧಿಗೆ ಮಾತ್ರ ನೇಮಕಾತಿಗೆ ಸಂಬಂಧಿಸಿದಂತೆ ವಿಧಿಸಬೇಕಾದ ನಿಬಂಧನೆ/ಷರತ್ತುಗಳು ಹಾಗೂ ಒಪ್ಪಂದದ ವಿವರಗಳನ್ನು ತೋಟಗಾರಿಕೆ ನಿರ್ದೇಶಕರು ನೀಡುವರು.

ಈ ಆದೇಶವು ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ನಿಯಮ 17 ರಲ್ಲಿನ ಉಪ ನಿಯಮ 2 ರ ಪರಿಧಿಯ ಒಳಗೆ ಬರುತ್ತಿದ್ದು, ಅದರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, (ತೋಟಗಾರಿಕೆ)

ಕೃಷಿ ಮತ್ತು ತೋಟಗಾರಿಕೆ ಇಲಾಖೆ

ಪಿ.ಆರ್. 256